# ಕೊರವಂಜಿ

Koravanji



ಸೆಪ್ಟೆಂಬರ್
೧೯೫೪

★

ಸಂಪಾದಕರು :
ಶ್ರೀ|| ರಾ. ಶಿ.

ಬರಹಗಾರರು :

ಶ್ರೀ|| "ಕೇಫ"
ಕು||. ಲೀಲಾ
ಶ್ರೀ|| ಸೋಮಯ್ಯ
ಶ್ರೀ|| ಹಾ. ರಾ.
ಶ್ರೀ|| ರಾಮಕೃಷ್ಣ
ಶ್ರೀ|| ಅ. ರಾ. ಸೇ.
ಶ್ರೀಮತಿ ಸರೋಜಿನಿ
ಶ್ರೀ|| ದಾಶರಥಿ ದೀಕ್ಷಿತ್

ಇತ್ಯಾದಿ, ಇತ್ಯಾದಿ.

ಬಿಡಿ ಪ್ರತಿ
ಕೇವಲ ನಾಲ್ಕಾಣೆ

ತಿಳಿನಗೆಯ ಮಾಸಪತ್ರಿಕೆ

# ನಾಗರ ಹಾವಿನ ಚರ್ಮದಿಂದ

# ರಕ್ಷಣೆ



ಮಕ್ಕಳ ವಿದ್ಯಾಭ್ಯಾಸದ
[illegible]

ಈ ವಿಮೆಯಿಂದ, ನಿಮ್ಮ ಮಕ್ಕಳಿಗೆ ಕಾಲಕ್ಕೆ ಸರಿಯಾಗಿ ಹಣ ಒದಗಿಸಲ್ಲಾಗುವುದರಿಂದ ವಿದ್ಯಾಭ್ಯಾಸಕ್ಕೆ ಅಡಚಣೆಯಾಗದಿರುವಂತೆ ಏರ್ಪಡಿಸಿದೆ ಮಕ್ಕಳ ವಿದ್ಯಾಭ್ಯಾಸಕ್ಕೆ ಅಡಚಣೆ ಇರದಂತೆ, ಈ ವಿಮೆಗಳಿಗೆ ಇಂದೇ ಸಹಾಯಮಾಡಿರಿ.

ಆಫ್ರಿಕಾದಲ್ಲಿ, ನಾಗರಹಾವನ್ನು ಅಘೋರವಾದ ಪ್ರದರ್ಶನದೊಂದಿಗೆ ಕೊಂದು, ಅದರ ಚರ್ಮವನ್ನು ಮರಕ್ಕೆ ತೂಗುಹಾಕಿ, ತಮ್ಮ ಎಳೆಯ ಮಕ್ಕಳನ್ನು ಆ ಚರ್ಮಕ್ಕೆ ಭಕ್ತಿಯಿಂದ ಮುಟ್ಟಿಸುತ್ತಾರೆ. ಇವರಿಂದ ಎಳೆಯ ಶಿಶುಗಳಿಗೆ ಕೇಡಿನಿಂದ ರಕ್ಷಣೆ ದೊರಕುತ್ತದೆಂದು ನಂಬುತ್ತಾರೆ. ಎಷ್ಟೋ ನಂಬಿಕೆಯಿಂದ ಮಾಡಿದರೂ, ಈ ಪ್ರಯತ್ನಗಳೆಲ್ಲಾ ಎಷ್ಟು ನಿಷ್ಪ್ರಯೋಜಕ!

ನಿಮ್ಮ ಮಕ್ಕಳ ಹಿತರಕ್ಷಣೆಗಾಗಿ, ಬೊಂಬಾಯಿ ಮ್ಯೂಚುಯಲ್ ನಿಮಗೊಂದು ಸುಲಭಸಾಧ್ಯವಾದ ಮಾರ್ಗ ದೊರಕಿಸುತ್ತದೆ. ಆಫ್ರಿಕಾದವರಿಗೆ ಮಕ್ಕಳ ಮೇಲಿನ ಮಮತೆಯಷ್ಟೇ ನಿಮಗೂ ಇರುವುದಾದರೆ ನಿಮ್ಮ ಮಕ್ಕಳಿಗೆ ವಿಮಾ ರಕ್ಷಣೆ ಇಲ್ಲದೆ ಒಂದು ಕ್ಷಣವೂ ಇರದಂತೆ ನೀವೂ ಏರ್ಪಡಿಸುತ್ತೀರಿ.



ಸ್ಥಾಪನೆ:
1871

ದಿ

## ಬಾಂಬೆ ಮ್ಯೂಚುವಲ್

## ಲೈಫ್ ಅಷ್ಯೂರೆನ್ಸ್ ಸೊಸೈಟಿ ಲಿಮಿಟೆಡ್,

ಬಾಂಬೆ ಮ್ಯೂಚುವಲ್ ಬಿಲ್ಡಿಂಗ್,

ದಾದಾಬಾಯ್ ನೌರೋಜಿ ರೋಡ್, ಬೊಂಬಾಯಿ 1.

ಬೆಂಗಳೂರು ಬ್ರಾಂಚ್ ಕಛೇರಿ:—172/3, ನರಸಿಂಹರಾಜಾ ರಸ್ತೆ, ಬೆಂಗಳೂರು 2.

NAS 134

**EVERY POLICYHOLDER A SHAREHOLDER**


Smiles of Satisfaction ...
The amazing public response to the widely renowned Mysore Sandal Soap is nothing but Smiles of Satisfaction from them.
It's ideal for women and children and for men who appreciate good soap.
Always insist on this Beauty Soap.
★
mysore
SANDAL SOAP
GOVERNMENT SOAP FACTORY, BANGALORE
(MEMBER, ISTMA)
H S I-I

# ಕೊರವಂಜಿ

ಸಂಪುಟ ೧೩ ಸೆಪ್ಟೆಂಬರ್ ೧೯೫೮ ಸಂಚಿಕೆ ೬

## ಕುಹಕಿಡಿಗಳು

ಮಂಡ್ಯದಲ್ಲಿ ಸಂಭವಿಸಿದ ಅಮಾನುಷ ಡಕಾಯಿತಿಯಿಂದ ಇಡೀ ದೇಶವೇ ರೊಚ್ಚಿಗೆದ್ದು—ಒಬ್ಬರು ಈ ರೀತಿ ಪೋಲೀಸರಿಗೆ ಸಲಹೆಮಾಡಿದ್ದಾರೆ.

—ರಸ್ತೆ ರಸ್ತೆಯಲ್ಲೂ ಸಶಸ್ತ್ರ ಪೋಲೀಸರು ಓಡಾಡುತ್ತಿರಬೇಕು.

—ಅಥವಾ ಪೋಲೀಸರು ಸಾಮಾನ್ಯ ವ್ಯಕ್ತಿಗಳಂತೆ ಉಡುಪು ಧರಿಸಿ ಗುಪ್ತವಾಗಿ ಗಸ್ತು ತಿರುಗಬೇಕು.

—ಅದೂ ಸಾಧ್ಯವಾಗದಿದ್ದರೆ, "ಇಲ್ಲಿ ಪೋಲೀಸರು ಗುಪ್ತವಾಗಿ ಸಾಧಾರಣ ಉಡುಪಿನಲ್ಲಿ ಗಸ್ತು ತಿರುಗುತ್ತಿರುತ್ತಾರೆ" ಎಂದು ನೋಟೀಸನ್ನಾದರೂ ಎಲ್ಲರಿಗೂ ಕಾಣುವಂತೆ ಹಾಕಬೇಕು.

ಎಂದು ಮೂರು ದರ್ಜೆಯ ಸಲಹೆ ನೀಡಿದ್ದಾರೆ.

*　　*　　*

ಇಡೀ ಜಗತ್ತಿನಲ್ಲಿ ಶಾಂತಿಗಾಗಿ ಶ್ರಮಿಸುತ್ತಿರುವ ನಮ್ಮ ದೇಶೀಯರು ಕಾಮನ್‌ವೆಲ್ತ್ ಪಂದ್ಯಗಳಲ್ಲಿ "ಶಾಂತಿ ಶಾಂತಿ, ಓಂಶಾಂತಿ" ಎಂದಂದುಕೊಂಡು ಒಂದು ನಂಬರನ್ನೂ ಗಳಿಸದೇ ಇದ್ದುದು ನ್ಯಾಯವಲ್ಲವೇ?

*　　*　　*

ಹೆಚ್ಚು ಹೆಚ್ಚಾಗಿ ಡಾಕ್ಟರುಗಳು ಹಳ್ಳಿಗಳಲ್ಲಿ ನೆಲಸಬೇಕು.

(ಭಾರತರತ್ನ ಶ್ರೀ ರಾಜಾಜಿ)

—ಯಾಕೋ! ಕಾಣೆ. ಹಳ್ಳಿಗಳಾದರೂ ಸುರಕ್ಷಿತವಾಗಿ ಇರಬಾರದೇ! ಅಲ್ಲಿಗೂ ಡಾಕ್ಟರುಗಳು ಹೋಗಿ ದಾಂಧಲೆ ಮಾಡಬೇಕೇ?

* * *

ಮೆರವಣಿಗೆಗೆ ಊರಿಗೆ ಊರೇ ಹೋಗಿತ್ತಂತೆ.

—ಅಂದಮೇಲೆ ಮೂರೇ ಮನೆಯಲ್ಲಿ ಹಗಲುಗಳ್ಳತನ ಆದುದು ಸೋಜಿಗ! ಕಳ್ಳರೆಲ್ಲಾ ಮೆರವಣಿಗೆಯಲ್ಲೇ ನಡೆದಿರಬೇಕು!

* * *

ಭಾವಿಗೆ ಆಕಸ್ಮಿಕವಾಗಿ ಬಿದ್ದ ಮಹಿಳೆಯನ್ನು ರಕ್ಷಿಸಿದಾತನನ್ನು ಊರವರೆಲ್ಲರೂ ಹೊಗಳಿದರಂತೆ.

—ಮಾರನೆಯ ಸಂಜೆ ಆಕೆಯ ಯಜಮಾನನು ರಕ್ಷಿಸಿದಾತನನ್ನು ಬಾಸುಂಡೆ ಬರುವತನಕ ಬಡಿದನಂತೆ. ಎಂಬುವುದು ಸುಳ್ಳಂತೆ.

* * *

ಯಥಾಪ್ರಕಾರ ಜನ ಪ್ರತಿನಿಧಿಗಳೊಬ್ಬರು ಆಂಧ್ರದಲ್ಲಿ ಸೋಡಾ ಮತ್ತು ಆಷ್ ಇವುಗಳ ಕಾರ್ಖಾನೆ ಸ್ಥಾಪಿಸಲ್ಪಡುತ್ತದೆ ಎಂದರು.

'ಸೋಡಾ ಆಷ್' ಎಂಬುದು ಏನು ಎಂದೇನೂ ಅವರಿಗೆ ತಿಳಿಯದು. -ನಮ್ಮ ಪ್ರತಿನಿಧಿ:—ಆಂಧ್ರ-ಪಾನ ನಿರೋಧ-ಸಮಿತಿ-ಸೋಡಾ-ಆಷ್-ಹೀಗೇ ಓಡಿದ್ದಿರಬೇಕು ಮನಸ್ಸು!!

* * *

ರಾಷ್ಟ್ರಾಧ್ಯಕ್ಷರು ಬಂದ ಸಲುವಾಗಿ, ಕಾಲೇಜು ಮಹಿಳೆಯರು ಉಗುರಿಗೆಲ್ಲಾ ತ್ರಿವರ್ಣ ರಂಗನ್ನು ಉಪಯೋಗಿಸಿದ್ದರೆಂಬುದು ಶುದ್ಧ ಸುಳ್ಳಂತೆ.

* * *

೩೦೦ ವರ್ಷಗಳ ಹಿಂದೆ ಹುಟ್ಟಿದ್ದರೆ ಖರ್ಚು ಬಲು ಕಡಿಮೆಯಾಗುತ್ತಿತ್ತು! —ಆದರೂ ಎಷ್ಟು ಸುಖವಾಗಿರಬಹುದಿತ್ತು!

* * *

ಆಟೋರಿಕ್ಷಾಕ್ಕೆ ಹಾರನ್ ಇರಲಿಲ್ಲ ಎಂದು ಮೊಕದ್ದಮೆ ಹೂಡಿದ್ದರಂತೆ—

—ಜಡ್ಜಿ ಆಟೋರಿಕ್ಷಾ ಬಂದ ಶಬ್ದ ಕೇಳಿ ನಕ್ಕನಂತೆ.

* * *

---

# ಊರಿಗಾಳು

ಗಾಂಧೀಜಿಯವರ ಪ್ರತಿಮೆಯನ್ನು ಎಲ್ಲಿ ಇರಿಸಬೇಕೆಂಬ ಸಮಸ್ಯೆಯನ್ನು ಮುನಿಸಿಪಲ್ ಕಾರ್ಪೋರೇಷನ್‌ನವರು ಇನ್ನೂ ಇತ್ಯರ್ಥಮಾಡಿಲ್ಲವಂತೆ....ಅದನು ನಗರದ ನಾನಾ ಭಾಗಗಳಲ್ಲಿ ಒಂದೊಂದು ವಾರ ಒಂದೊಂದು ಕಡೆ ಸ್ಥಾಪಿಸುವುದೇ ಎಲ್ಲರನ್ನೂ ತೃಪ್ತಿಪಡಿಸಲು ಒಳ್ಳೆಯ ಉಪಾಯ.

*  *  *

ತುಂಗಭದ್ರಾ ಅಣೆಕಟ್ಟಿನಬಳಿ ಇರುವ 'ವೈಕುಂಠ'ದಲ್ಲಿ ಮೈಸೂರು ಅಸೆಂಬ್ಲಿಯ ಕಾಂಗ್ರೆಸ್ ಪಕ್ಷದ ಸಭೆಯನ್ನು ನಡೆಯಿಸಲಾಗುವುದಂತೆ....ವೈಕುಂಠ ಸಮಾರಾಧನೆ ಸಾಂಗವಾಗಿ ನೆರವೇರಲಿ.

*  *  *

ಏಸುಕ್ರಿಸ್ತನೇ ಇಂದು ದಕ್ಷಿಣ ಆಫ್ರಿಕಾದ ಪೋಸ್ಟ್ ಆಫೀಸಿಗೆ ಹೋದರೆ, ಬಿಳಿಯರಿಗೆ ಸ್ಟಾಂಪು ಕೊಡುವ ಕಿಟಿಕಿಯ ಬಳಿಯಿಂದ ಅವರನ್ನು ಡಾ|| ಮಲಾನ್ ರವರು ಆಚೆ ನೂಕುತ್ತಾರೆ ...ಸದ್ಯಃ, ಆ ಸಹವಾಸ ತಪ್ಪಿತಲ್ಲಾ, ಎಂದು ಏಸುವೂ ಕೂಡ ಸಂತೋಷಪಡುತ್ತಾರೆ; ಕ್ರೈಸ್ತರ ಸಂಗಡ ಮತ್ತೊಂದು ಕಿಟಿಕಿಯಬಳಿ ನಿಲ್ಲುತ್ತಾರೆ.

*  *  *

ತಿರುಪತಿ ವಿಶ್ವವಿದ್ಯಾನಿಲಯಕ್ಕೆ ಹೊರಗಿನ ಯೂನಿವರ್ಸಿಟಿಗಳಿಂದ ಪರೀಕ್ಷಕರನ್ನು ಕರೆಯಿಸುವುದಿಲ್ಲವಂತೆ....ಅಲ್ಲೇ, ಲಾಗಾಯ್ತಿನಿಂದಲೂ ಅದೇ ಕೆಲಸದಲ್ಲಿ ನುರಿತವರು ಅನೇಕರಿದ್ದಾರಲ್ಲಾ.

*  *  *

ಜಪಾನ್ ಮಾದರಿ ಭತ್ತದ ವ್ಯವಸಾಯದಿಂದ ನಮ್ಮಲ್ಲಿ ಅತ್ಯಧಿಕ ಪ್ರಮಾಣದ ಉತ್ಪತ್ತಿಯಾಗುತ್ತಿರುವುದನ್ನು ಕೇಳಿ, ಜಪಾನೀ ರೈತರ ನಿಯೋಗವೊಂದು ಇಷ್ಟರಲ್ಲೇ ಮೈಸೂರಿಗೆ ಬರಲಿದೆಯಂತೆ.

*  *  *

೧೯೫೩–೪ರಲ್ಲಿ ಅಮೇರಿಕಾದಲ್ಲಿ ಪ್ರತಿ ೧೦೦೦ ಮಹಿಳೆಯರ ಮರಣಕ್ಕೆ ಸರಾಸರಿ ೧೩೩೩ ಪುರುಷರು ಮರಣ ಹೊಂದಿದರು... ಹಾಗಾದರೆ, ಪರಲೋಕದಲ್ಲೂ ಆ ಮಹಿಳೆಯರಿಗಾಗಿ ಕಾದಾಟ ನಡೆದೇ ನಡೆಯುತ್ತದೆ.

*   *   *

ವಾರಕ್ಕೆ ೫೦೦ ಜನರಂತೆ ಆಫ್ರಿಕಾದ ಮೌ ಮೌಗಳನ್ನು ಬಿಳಿಯವರು ಕೊಲ್ಲುತ್ತಿದ್ದಾರೆ; ಇದೇ ಪ್ರಕಾರ ಮುಂದುವರಿದರೆ, ೫ ವರ್ಷಗಳಲ್ಲಿ ಅವರನ್ನು ನಿರ್ನಾಮಮಾಡಬಹುದೆಂದು ಲೆಖ್ಖಾ ಹಾಕಲಾಗಿದೆ .... ಆದರೆ, ಅಷ್ಟುಹೊತ್ತಿಗೆ, ಬಿಳಿಯವರ ಬಣ್ಣ ತೀರ ಕಪ್ಪಾಗುತ್ತದೆ, ಜಗತ್ತು ಬಳಿಯುವ ಮಸಿಯಿಂದ.

*   *   *

ಹಾಲಿ ಮಂತ್ರಿಗಿಂತ ಮಾಜಿ ಮಂತ್ರಿಗೆ ಮನ್ನಣೆ ಹೆಚ್ಚು, ಎಂಬುದನ್ನು ಆಟ್ಲೀಯವರೂ, ಮಾವುತ್ಸೆ ಟುಂಗ್‌ರವರೂ ತಮ್ಮ ಸ್ನೇಹ ಸಮಾಗಮದಿಂದ ತೋರ್ಪಡಿಸಿದಾರೆ ...ಆದರೂ, ಚರ್ಚಿಲ್ ಇನ್ನೂ ಪೀಠಕ್ಕೆ ಅಂಟಿಕೊಂಡೇ ಇರುವುದು ಆಶ್ಚರ್ಯ.

*   *   *

ಇತರರು ನಮ್ಮನ್ನು ಕುರಿತು ಆಡುವ ಮಾತು ಅರ್ಥವಾಗದೆ ಇದ್ದರೆ ಕ್ಷೇಮ; ಅರ್ಥವಾದರೆ, ವೈಮನಸ್ಯಗಳು ಸಿದ್ಧ, ಎಂದೊಬ್ಬರು ಮನಶ್ಶಾಸ್ತ್ರಜ್ಞರು ಹೇಳುತ್ತಾರೆ ....ಏಕೀಕರಣ ವಿರೋಧಿ ಇರಬೇಕು.

*   *   *

ಭಾರತ ಸಂಸ್ಕೃತಿಗೆ ಹೊಂದಿಕೊಳ್ಳುವ ಉತ್ತಮ ಆಸನಗಳನ್ನು ನಾವು ಮತ್ತೆ ಪ್ರಚಾರಕ್ಕೆ ತರಬೇಕು (ಭಾಷಣ)....ಅಂದರೆ, ಸಿಂಹಾಸನಗಳನ್ನೆ?

*   *   *

ಪ್ರತಿ ಸರ್ಕಾರವೂ ತನ್ನ ವರಮಾನದಲ್ಲಿ ನೂರರ ಒಂದು ಭಾಗವನ್ನಾದರೂ ವೈಜ್ಞಾನಿಕ ಸಂಶೋಧನೆಗಾಗೆ ತೆಗೆದಿಟ್ಟರೆ, ಭಾರತದ ಪ್ರಗತಿ ಆದೀತು....ಸಾಲದು! ಪ್ರತಿ ವೈಜ್ಞಾನಿಕನೂ ದಿನವೂ ತನ್ನ ಕಾಲದ ನೂರರ ಒಂದು ಭಾಗವನ್ನಾದರೂ ಸಂಶೋಧನೆಗಾಗಿ ತೆಗೆದಿರಿಸಬೇಕು.

*   *   *

ಹಿರಿಯ ಸಭೆಯ ಹಿರಿಯ ನಾಯಕರೆಲ್ಲರೂ ಒಂದು ಹೊಸ ರಾಜಕೀಯ ಪಕ್ಷವನ್ನು ಮುಂದಿನ ದಸರಾಗೆ ಮುಂಚೆ ಸ್ಥಾಪಿಸಲು ಯೋಚಿಸುತ್ತಿರುವರಂತೆ; ಅದರ ಹೆಸರು ಇನ್ನೂ ನಿರ್ಧಾರವಾಗಿಲ್ಲ (ಸುದ್ದಿ)....ಪಿತೃಪಕ್ಷ, ಅಂತ ಪಂಚಾಂಗದಲ್ಲೇ ಇದೆಯಲ್ಲಾ.

*   *   *

# "ಸ್ವರ್ಗ ದೊರಕಿದೆ"

ಆಸ್ಕರ್‌ವೈಲ್ಡ್ ಫ್ರಾನ್ಸಿಗೆ ಗಡೀಪಾರಾಗಿ ಹೋಗುವ ಮುನ್ನ ತನ್ನ ಸ್ನೇಹಿತರಿಗೆಲ್ಲಾ ಒಂದು ಪತ್ರಬರೆದು "ನೀವು ಯಾರೂ ರೈಲ್ವೆಸ್ಟೇಷನ್ನಿಗೆ ಬಂದು ಬೀಳ್ಕೊಡಬಾರದು" ಎಂದು ಕರಾರುವಾಕ್ಕಾಗಿ ಹೇಳಿದ್ದನಂತೆ

ಸಂಜೆಯ ರೈಲಿನಲ್ಲಿ ಆತ ಕೂತು ಹೊರಟಾಗ ಅವನನ್ನ ಬೀಳ್ಕೊಡಲು ಯಾವ ಸ್ನೇಹಿತನೂ ಬಂದಿರಲಿಲ್ಲವಂತೆ. ಆದರೆ ಸ್ಟೇಷನ್ನಿನ ಕಟಕಟ್ಟೆಯಾಚೆ ಒಬ್ಬ ಸ್ನೇಹಿತ ಇವನನ್ನೇ ದುರುಗಟ್ಟಿಕೊಂಡು ನೋಡುತ್ತಿದ್ದನಂತೆ.

ಫ್ರಾನ್ಸಿಗೆ ಹೋದಮೇಲೆ ಆಸ್ಕರ್‌ವೈಲ್ಡ್ ಆ ಸ್ನೇಹಿತನಿಗೆ ಒಂದು ಪತ್ರಬರೆದು "ನನ್ನ ಕಾಗದದಂತೆ ಎಲ್ಲ ಸ್ನೇಹಿತರೂ ನಡೆದುಕೊಂಡರು ನೀನು ಹಾಗೇ ಮಾಡಿದೆ. ಆದರೆ ಕಟಕಟ್ಟೆಯಾಚೆ ನಿಂತು ನನ್ನನ್ನು ಮಾತನಾಡಿಸದೆ ಬೀಳ್ಕೊಟ್ಟೆ ನೀನು. ಇದಕ್ಕಿಂತ ಅಲ್ಪವಾದ ಕೆಲಸಗಳಿಗೆಲ್ಲಾ ಎಷ್ಟೋ ಜನರಿಗೆ ಸ್ವರ್ಗದೊರಕಿದೆ" ಎಂದು.

ಈ ಕತೆ ಕೇಳಿದಾಗ ನನಗೆನ್ನಿಸಿತು. ಇದೇರೀತಿ ಎಷ್ಟೋ ಪ್ರಸಂಗಗಳು ನಡೆದಿರಲೇ ಬೇಕಲ್ಲವೇ?

ನಮ್ಮ ಶಾಮೆ ಯ್ಯಂಗ್ರಾರಿ, ಗೋಪಾಲಸ್ವಾಮಿಗುಡಿಯಲ್ಲಿ ನಿಶಿರಾತ್ರೆ ಹದಿಮೂರು ಗಂಟೆಯಲ್ಲಿ ತನ್ನಪಾಲಿಗೆ ಬಂದ ಪುಳಿಯೋಗರೆಯನ್ನು ನನಗೆ ಕೊಟ್ಟು, ನನ್ನಪಾಲಿನ ಸಕ್ಕರೆ ಪೊಂಗಲನ್ನು ತಾನು ಬದಲಿಸಿದ ಪುಣ್ಯಕ್ಕಿಂತ ಅಲ್ಪವಾದ ಪುಣ್ಯ ಮಾಡಿದವರು ಸ್ವರ್ಗಕ್ಕೇರಿಲ್ಲವೇ?

ನನ್ನಮುಂದೆ ಪರೀಕ್ಷೆಗೆ ಕೂತಿದ್ದ ಸೋಮಣ್ಣ ತಾನು ಬರೆದ ಹಾಳೆಗಳನ್ನು ಹಿಂದೆ ಕೂತಿದ್ದ ನನಗೆ ಕಾಣಿಸುವಂತೆ ಪಕ್ಕದಲ್ಲಿಟ್ಟ ಪುಣ್ಯ ಅವನನ್ನ ಸ್ವರ್ಗಕ್ಕೇರಿಸದೆ ಬಿಟ್ಟೀತೇ?

ನನ್ನ ಮದುವೆಗೆ ಎಂದು ಸಿದ್ಧಮಾಡಿಕೊಂಡು, ವರೋಪಚಾರದಲ್ಲಿ ಕಡಿಮೆಯಾಯ್ತು ಎಂದು ನಮ್ಮಪ್ಪ ಹಿಂತಿರುಗಿ, ಅದೇ ಲಗ್ನದಲ್ಲಿ ಅದೇ ಕನ್ಯೆಯನ್ನು ಮದುವೆ ಮಾಡಿಕೊಂಡು ನರಳುತ್ತಿರುವ ಸಿದ್ದಪ್ಪನ ಪುಣ್ಯ ಅವನನ್ನು ಕೈಲಾಸಕ್ಕೆ ಸಾಗಿಸದೆ ಬಿಟ್ಟೀತೆ ಸತ್ತನಂತರ.

ಓಟಿನ ಎಣಿಕೆಮಾಡುವಾಗ ರಾಮಾಚಾರಿಯ ಹೆಸರನ್ನೆಲ್ಲಾ ನನ್ನ ಹೆಸರಿಗೇ ಕೂಗಿ ಓಟು ಪಲಿಸಿಕೊಟ್ಟ ವೀರಪ್ಪನಿಗೆ ನಾನು ಕೊಟ್ಟ ಹತ್ತುಸಾವಿರಕ್ಕಿಂತ ದೇವರು ಕೊಡುವ ಸ್ವರ್ಗವೇ ಹಿರಿದಲ್ಲವೇ?

ನಮ್ಮನ್ನಗಲಿದರೂ, ನಮ್ಮ ಪಾಪಗಳನ್ನು ಮನ್ನಿಸಿ, ನಮಗಾಗಿ ತನ್ನ ಟೋಪಿಯನ್ನೇ ಬಿಟ್ಟು ಹೋದ ಮಹಾತ್ಮನಿಗೆ ಸ್ವರ್ಗಸಿಗುವುದರಲ್ಲಿ ಆಶ್ಚರ್ಯವೇ? ಅದಕ್ಕೂ ಕಡಿಮೆ ಪುಣ್ಯಮಾಡಿದವರಿಗೆ ಸ್ವರ್ಗ ಇಲ್ಲೇ ಸಿಗಲಿಲ್ಲವೇ?

ನಮ್ಮ ಕೈಹಿಡಿದು ನಡೆಸುವವರು ತೌರಿಗೆಂದು ತಿಂಗಳುಗಟ್ಟಲೆ ಹೋಗಿ, ನಮ್ಮ ಸಂಸಾರ ಜೀವನವನ್ನು ಸುಖಿಯಾಗಿಸಿರುವಂತೆ ಮಾಡಿದ ನಮ್ಮಾಕೆಗಳಿಗೆ ಸ್ವರ್ಗ, ಸತ್ತಮೇಲೆ, ತಪ್ಪೀತೆ?

---

# ಅ ಪ ರ ಂ ಜಿ ದೇ ವಿ

---

ಆನೆಗೆ ಅಕುಂಶ; ಕುದುರೆಗೆ ಕಡಿವಾಣ; ಎಂಜಿನಿಗೆ ಬ್ರೇಕು, ಎತ್ತಿಗೆ ಮೂಗುದಾರ; ಇಂತಹುದನ್ನೆಲ್ಲ ಆಳವಡಿಸಿದ ಈ ಮಾನವನ ದಾನವತೆಗೆ ಅಂಕುಶವೆಂದು? ಕಡಿವಾಣವೆಲ್ಲಿಯದು? ಬ್ರೇಕ್ ಎಂಥದು? ಮೂಗುದಾರ ಯಾವುದರಿಂದ? ಕೇಳಿದಳು, ನಮ್ಮ ಕೊರವಂಜಿ ಕಾಯುವಪರಂಜಿದೇವಿ.

ಗಾಜನ್ನು ಮಾಣಿಕ್ಯವೆಂಬರೆ? ಚ್ಯಂಗ್ ಕೈ ಷೇಕನ್ನು ಮಹಾತ್ಮೆ ಟುಂಗೆಬ್ಬರೆ? ಕತ್ತೆಯನೇ ಕುದುರೆ ಎಂಬರೆ? ಮೂಕನನ್ನು ವಾಚಾಲನೆಂಬರೆ? ಜಾತಿಯನು ನೀತಿಯೆಂಬರೆ? ಸಿಪ್ಪೆಯನೇ ತಿಪ್ಪೆಯನೇ ತೊಪ್ಪೆಯನೇ ತಿನಿನೆಂಬರೆ? ಒಡಕನ್ನು ವುಡಕೆ ಎಂಬರೆ? ಕೇಳಿ ನಕ್ಕಳು ನಮ್ಮ ಕೊರವಂಜಿ ಕಾಯುವಪರಂಜಿದೇವಿ.

ಹೊಟ್ಟೆಯ ಮೇಲೊಂದು ಬಟ್ಟೆಯಕಟ್ಟಿ ಅನ್ನವ ಮೆತ್ತಿದರೆ, ಹಸಿವು ಇಂಗುವುದೆ? ಗಂಟಲಸುತ್ತ ನೀರಿನ ಬಟ್ಟಲನಿಟ್ಟರೆ, ದಾಹ ಇಂಗುವುದೆ? ಸಂಸ್ಕೃತಿಯನು ಕುರಿತ ಸುದೀರ್ಘಭಾಷಣಗಳನ್ನು ಕಿವಿಗೆ ಹುಯ್ದರೆ, ಮೆದುಳಿಗದು ಇಳಿಯುವುದೆ? ಮನವನದು ಹದಗೊಳಿಸಿತೆ? ಒಳಗಣ ಉದ್ಯಾನದಲಿ ಬೀಜ ಮೊಳೆತು ಗಿಡ ಚಿಗುರಿ ಹೂಬಿಟ್ಟು ಪರಿಮಳವ ಸೂಸದಿರೆ, ಸಂಸ್ಕೃತರ ದೆಂತಾಗುವರು ಪ್ರಸಾರವೆಂತಾಗುವುದು, ಕೇಳಿದಳು ನಮ್ಮ ಕೊರವಂಜಿ ಕಾಯುವಪರಂಜಿದೇವಿ.

---

# ಟೂತ್‌ಪೇಸ್ಟು

ಹಳ್ಳಿಗರಿಗೆ ಹಲ್ಲುಪುಡಿ – ಸಾಕು!
ಆದರೆ, ನಮಗೆ? ನಾಗರಿಕರಿಗೆ? ನೌಕರರಿಗೆ?
ಇಂಗ್ಲೀಷ್ ಬಲ್ಲರಿಗೆ? ಇಸ್ಕೂಲು ಹುಡುಗಿಯರಿಗೆ?
ಮಿಡಿಲ್ ಕ್ಲಾಸ್ ಮಡದರಿಗೆ? ಮಡದಿಯರಿಗೆ?—ಟೂತ್ ಪೇಸ್ಟೇ ಬೇಕು!
ಆಟ್ಯೂಬ ಹಿಸುಕುತ್ತ, ತೆಳ್ಳನೆಯ ಗುಂಡನೆಯ, ಸಾವಿಗೆಯ ತುಂಡನ್ನು
ಬ್ರಷ್ ಮುಳ್ಳು ಹಾಸಿಗೆಯಲಿ, ಮಲಗಿಸಿ ಬಾಯ್ಗಿರಿಸಿ, ನೊರೆಯನುಣ್ಣಲಿ ಬೇಕು!
ಮುಗಿಯುತ್ತ ಬಂದಾಗ,........ .......?
ಕೆಳಗಿಂದ ಮೇಲಕ್ಕೆ, ಬಲವಂತದಿಂದಲೇ
ಟ್ಯೂಬ ಹಿಸುಕಲು ಚಂದ!....ವಾರವೊಂದರ ಮೇಲೆ?
ಪಕ್ಕದಿಂದಲೆ ಹಿಟ್ಟು, ತೂತು ಮಾಡುತ ಬಂದು,
ಕೈತುಂಬ ಗಜಿಬಿಜಿ! ಹೊಟ್ಟೆತುಂಬಿದ ಟ್ಯೂಬು, ಹೀಗೆ,
ದಿನ ದಿನಕು ಬಡವಾಗಿ, .. ಕೊನೆಗೆ ತಗಡಾಗಿ ಕೂತಾಗ,
ಎರಡಾಗಿ ಸೀಳುವೆವು; ನಲದಮೇಲಿರಿಸುತ್ತ,
ಉಗುರಿಂದ ಕೆರೆಕೆರೆದು, ಬ್ರಷ್ಷಮೇಲದನುಜ್ಜಿ, ಬ್ರಷ್ಷಿನಿಂದಲೆ ಉಜ್ಜಿ
ಕೊಟ್ಟ ಕಾಸನು ಪೂರ ಹಿಂದಕ್ಕೆ ಪಡೆಯುತ್ತ
ತೃಪ್ತರಾಗುವೆವಾವು! ಬಡಮಿಡಲ್ ತರಗತಿಯ ಜಂಭದಿಂದ

---

**ಹಾದಿಯಲ್ಲಿ ಕೇಳಿಸಿದುದು :**

"ಅಲ್ರೀ – ನಿಮ್ಮ ತಿರುಮಂತ್ರ ತೆಗೆದರಲ್ಲಾ! ನೀವು ಕೇಳ್‌ಲ್ದಾಗ್ಲೆಲ್ಲಾ ನನ್ನ ಸ್ವಂತ ಭಟ್ಟೆಯಿಂದ ಕುಡಿಸಿ ಕೇಸುಗಳನ್ನ ನಿಮಗೆ ಕೊಡ್ತೀನಿ. ತಿರುಗಿ ನನ್ನೇ ಪೀಡಿಸ್ತೀರಲ್ಲಾ – ನ್ಯಾಯವೋ? ಗೊತ್ತೊ? – 'ಧರೆ ಬೀಜಂಗಳ ನುಂಗೆ ಬೇಲಿ ಹೊಲನೆಲ್ಲಂ' ಅನ್ನೋ ಪದ್ಯ?"

ಯಥಾರ್ಥ!

—"ಕೇಫ"

# ಯಾತ್ರಿಕರ ಪತ್ರ

## (೧೪)

---

ಚಂದಾಪುರ ಬಿಟ್ಟು ಪುನಹ ವಾಪಸ್ ಮೈನ್‌ರೋಡಿಗೆ ಹೊರಟೆವು ಯಾವುದೂ ತೊಂದರೆಯಿಲ್ಲದೆ ನಡೆದು ಬರುತ್ತಿದ್ದೆವು–ಆದರೆ ರಾಜ ಅಲ್ಲಲ್ಲಿ ತನ್ನ ವಾಹನವನ್ನು ಬಿಟ್ಟು ರಸ್ತೆಯ ಎರಡು ಪಕ್ಕಗಳಲ್ಲಿ ಬೆಳೆದಿದ್ದ ಯಾವುದೋ ಎಲೆಯನ್ನು ಶೇಖರಿಸುವುದಕ್ಕೆ ಹತ್ತಿದ್ದ. ನಾನೂ, ಚಂದಿ ಅವನಿಗೋಸ್ಕರ ಅಲ್ಲಲ್ಲಿ ನಿಂತು ನಿಂತು ಸುಸ್ತಾದೆವು. ಹೀಗೇ ಒಂದುಸಾರಿ ಸುಮಾರು ಕಾಲುಗಂಟೆಗಳ ಕಾಲ ನಮ್ಮನ್ನು ನಿಲ್ಲಿಸಿ, ರಾಜ ಒಂದು ಮೂಟೆಯಷ್ಟು ಎಲೆ ಜಮಾಯಿಸಿಕೊಂಡು ಬೆವರೊರಿಸಿಕೊಳ್ಳುತ್ತಾ ಬಂದ.

ಆಗ ಚಂದಿ "ಏನೋ ಇದು? ಯಾವುದೋ ಮಿಲಿಟರಿ ಕಂಟ್ರಾಕ್ಟ್ ಹೊಡೆದಿರೋ ಹಾಗಿದೆ" ಅಂದ.

ಅದಕ್ಕೆ ರಾಜ "ಇದೇನು ಗೊತ್ತೇನೋ–ಮರಗೆಸವು!" ಅಂದ.

ನನಗೆ ಮೈಯೆಲ್ಲಾ ನವೆ ಹತ್ತಿತು. "ಈ ಬಯಕೆ ಯಾವತ್ತಿನಿಂದ ನಿನಗೆ" ಅಂತ ಕೇಳಿದೆ.

ಅದಕ್ಕೆ ರಾಜ "ನೋಡ್ರೋ–ಇದೇ ಮೈನ್‌ರೋಡಿನಲ್ಲಿ ನಾವು ಈಕಡೆ ತಿರುಗಿದೆವಲ್ಲಾ – ಅಲ್ಲಿ ಒಂದು ಛತ್ರ ಹೋಟ್ಲಿದೆ. ಅಲ್ಲಿಗೆ ನಾನು ನೀರು ಕುಡೀಲಿಕ್ಕೆ ಹೋಗಿದ್ದೆ. ಆಗ ಭಟ್ರು, ನಾವು ಚಂದಾಪುರಕ್ಕೆ ಹೋಗ್ತಿದೀವಿ ಅಂತ ತಿಳಿದಮೇಲೆ ನಾವು ವಾಪಸಾಗುವಾಗ ಈ ಮರಗೆಸವು ತರುವಂತೆ ಹೇಳಿದರು. ಇದರಲ್ಲಿ ಅದೇನೋ 'ಪತ್ರವಡೆ' ಮಾಡಿಕೊಡ್ತಾರಂತೆ – ಬಹಳ ರುಚಿ ಅಂತ ಭರವಸೆ ಕೊಟ್ರು. ಅದಕ್ಕೇ ಈ ರಷ್ತು" ಅಂಥ.

ನಾನು ಪೆಚ್ಚಾದೆ.

"ನೀರು ಕುಡಿದಮೇಲೆ ಆ ಭಟ್ರನ್ನ ಏನಾದರೂ ರೇಗಿಸಿದೆಯಾ?" ಅಂತ ಕೇಳಿದೆ.

"ಇಲ್ಲ" ಅಂದ.

"ಮತ್ತೆ ಈ ಶಿಕ್ಷೆಯಾಕೆ ನಿನಗೆ?" ಅಂತ ಕೇಳಿದೆ.

ರಾಜ ಉತ್ತರ ಕೊಡಲಿಲ್ಲ ನಾನು ಮುಂದೆ ವಿಚಾರಮಾಡಲಿಲ್ಲ. ರಾಜ ಒಬ್ಬನೇ ಅಷ್ಟು ಎಲೆ ಹೊರುತ್ತಿದ್ದುದನ್ನು ನೋಡಿ ನಾನು ಚಂದಿ ಇಬ್ಬರೂ ರಸ್ತೆ ಅಂಚಿನಲ್ಲಿದ್ದ ಅದೇ ಮರಗೆಸವನ್ನು ಕೀಳ ಹತ್ತಿದೆವು. ನಾನು ರಾಜ ಚಂದಿ ಮೂವರೂ ಭಟ್ರು ಹೋಟೆಲಿನ ಮುಂದೆ ಎಲೆ ರಾಶಿ ಹಾಕಿದೆವು – ಸುಮಾರು ಮುಕ್ಕಾಲು ಲಾರಿಯಷ್ಟಾಯಿತು. ನಮ್ಮ ಉತ್ಸಾಹದಲ್ಲಿ ಆ ಹೋಟೆಲಿನ ಮುಂಬಾಗಿಲನ್ನೇ ಎಲೆಯಿಂದ ಮುಚ್ಚಿದ್ದೆವು. ಹೋಟಲೊಳಗೆ ಗದ್ದಲವೆದ್ದಿತು. ಒಳಗಿದ್ದ ಗಿರಾಕಿಗಳು, ಮಾಣಿಗಳು, ಭಟ್ರು ಒಟ್ಟಿಗೇ ಎಲೇ ರಾಶಿಯನ್ನು ಭೇದಿಸಿ ರಸ್ತೆಗೆ ಬಂದರು. ವಾತಾವರಣ ತುಸ ಅಶಾಂತಿ ಸೂಚಿಸುವ ಹಾಗಿತ್ತು. ಭಟ್ಟರನ್ನು ಸಮಾಧಾನಮಾಡಿ ಅವರಿಗೆ ನಿಜಸ್ಥಿತಿ ತಿಳಿಸುವ ಹೊತ್ತಿಗೆ ನಮ್ಮ ತಿಥಿಯಾಯಿತು

ಭಟ್ರು ಎಲೆಕಡೆ ನೋಡಿದರು. ಒಂದು ಎಲೆ ಕೈಲಿ ತೆಗೆದುಕೊಂಡರು. ಪರೀಕ್ಷೆ ಮಾಡಿದರು. ಮಾಣಿಗಳೂ ಒಂದೊಂದು ಎಲೆ ತೆಗೆದುಕೊಂಡು ಪರೀಕ್ಷೆಮಾಡಿದರು. ಕಡೆಗೆ ಭಟ್ರು ನಮ್ಮಕಡೆ ತಿರುಗಿದರು. ಅಂದರು—

“ಇದು ಮರಗೆಸವಲ್ಲ, ನೆಲಗೆಸವು. ಇದರಲ್ಲಿ ಪತ್ರವಡೆ ಮಾಡಿದರೆ ದನಾ ಕೂಡ ಮುಟ್ಟೊಲ್ಲ. ದಯವಿಟ್ಟು – ಈ ರಾಶೀನ ರಸ್ತೆ ಆ ಪಕ್ಕಕ್ಕೆ ಬದಲಾಯಿಸಿ ನನ್ನ ಹೋಟಲನ್ನ ಜೈಲಿನಿಂದ ಬಿಡುಗಡೆಮಾಡಿದರೆ ಎಷ್ಟೋ ಉಪಕಾರವಾಗುತ್ತೆ”

ಅಂತ ನಮಸ್ಕರಿಸಿ, ಆ ರಾಶಿಗೆ ಪ್ರದಕ್ಷಿಣೆ ಹಾಕಿ, ಹೋಟಲಿನ ಹಿಂಬಾಗಿಲಿನಿಂದ ಒಳಕ್ಕೆ ಹೋದರು. ಗಿರಾಕಿಗಳೂ ಮಾಣಿಗಳೂ ಅದೇ ದಾರಿಯಲ್ಲಿ ಒಳಕ್ಕೆ ಹೋದರು. ರಸ್ತೆಯಲ್ಲಿ ಮತ್ಯಾರೂ ಇರಲಿಲ್ಲ. ನೆಲಗೆಸವಿನ ರಾಶೀನ ರಸ್ತೆಯ ಈಕಡೆಗೆ ಸಾಗಿಸಿ, ಕೈವರಸಿಕೊಂಡು ನಮ್ಮ ದಾರಿ ಹಿಡಿದೆವು. ಹೊರಡುಕ್ಕೆ ಮುಂಚೆ ತುಸ ಕಾಫಿ ಕುಡಿದು ಹೋಗೋಣ ಅಂದೆ. ಆದರೆ ರಾಜ ಒಪ್ಪಲಿಲ್ಲ

“ಪುನಹ ಆ ಭಟ್ಟರ ಹೋಟಲಿಗೆ ಕಾಲಿಡೊಲ್ಲ” ಅಂದ

ಮುಂದೆ ಹೊರಟೆವು ಆರು ಮೈಲಿಗಳು ಸರಾಗವಾಗಿ ಕಳೆದು ಅಂದರೆ ತುಳಿದು – ಜೀಕನಹಳ್ಳಿಗೆ ಬಂದೆವು. ನಮಗೆ ಹಸಿವು ಬಾಯಾರಿಕೆ – ಅದೃಷ್ಟವಶಾತ್ ಅಲ್ಲಿಯೇ ಇದ್ದ “ನಿಯೊ ಫಲಹಾರ” ಮಂದಿರಕ್ಕೆ ನುಗ್ಗಿದೆವು. ಸೊಂಟ ಸಡಿಲಮಾಡಿ ಒಳಗೆ ಕೂತೆವು. ಆದರೇನು? “ನಿಯೋ ಫಲಹಾರ ಮಂದಿರ”ದ ಮೆನು– ಹಲಸಿನ ಹಣ್ಣಿನ ದೋಸೆ, ಬೇಣೀಕಾಯಿ ಇಡ್ಲಿ, ಬಿದುರುಕಳ್ಳೆ ಸಾಂಬಾರು, ಅಣಬೆ (ನಾಯಿಕೊಡೆ) ಪಲ್ಯ, ಜೊತೆಗೆ ಅಮಟೇಕಾಯಿ ಸಾಸುವೆ! ರಾಜ ಚಂದಿ ಕೂಡ ಯಾವುದೂ ತಿನ್ನುಕ್ಕೆ ಒಪ್ಪಲಿಲ್ಲ. ಪಕ್ಕದ ಅಂಗಡಿಯಲ್ಲಿ ಒಂದು ‘ಕಲರ್’ ಕುಡಿದು ಮುಂದೆ ಹೊರಟೆವು.

ಸುಮಾರು ಒಂದು ಫರ್ಲಾಂಗ್ ಹೋಗಿರಬಹುದು–ನಮ್ಮ ಹಿಂದಿನಿಂದ ಒಂದು ಬಸ್ಸು ಬುಸುಗುಟ್ಟುತ್ತ ಬಂತು. ನಾವು ರಸ್ತೆಯ ಪಕ್ಕದಲ್ಲಿದ್ದ ಮೈದಾನಕ್ಕೆ ಹಾರಿದೆವು. ಬಸ್ಸು ಅಲ್ಲಿಯೇ ನಿಂತಿತು. ಐದು ಬಾರಿ ಗುಟುರುಹಾಕಿ, ಮರಣಯಾತನೆಯಿಂದ ನಿಟ್ಟುಸಿರು ಬಿಟ್ಟು ನಿಂತಿತು. ಬಸ್ಸಿನಿಂದ ಮೂವರು ಕೆಳಗೆ ಧುಮುಕಿದರು. ಒಬ್ಬ–ಆತ ಡ್ರೈವರ್ – ಬಸ್ಸಿನ ಮುಂಭಾಗದಲ್ಲಿದ್ದ ಕಾರ್ಖಾನೆ ಬಾಗಿಲು ಎತ್ತಿ ಒಳಗಿಳಿದ. ಎರಡನೆಯವ–ಆತ ಕಂಡಕ್ಟರ್–ಬಸ್ಸಿನಡಿಗೆ ನುಸಿದ. ಮೂರನೆಯವ–ಆತ ಕ್ಲೀನರ್ ಬಸ್ಸಿನ ಮಹಡಿ ಹತ್ತಿದ. ನಾನು ರಾಜ ಚಂದಿ ಮುಂದಿನ ಕಾರ್ಯಕ್ರಮವನ್ನು ರಸ್ತೆಯಮೇಲೆ ನೋಡುತ್ತ ನಿಂತೆವು. ಸುಮಾರು ಅರ್ಧಘಂಟೆಯಕಾಲ ಆ ಮೂವರಲ್ಲೇ ಬಸ್ಸಿನಬಗ್ಗೆ, ಬಸ್ಸಿನ ಮಾಲೀಕ – ಆತನ ಕುಟುಂಬದ ಬಗ್ಗೆ ಮತ್ತು ಆ ಬಸ್ಸಿನ ನಿರ್ಮಾಪಕ–ಅವನ ಕುಟುಂಬದ ಬಗ್ಗೆ ಕೂಗಾಟ ಬೈದಾಟಗಳಾದವು. ಈ ಬೈದಾಟ ಕೂಗಾಟಗಳ ಮಧ್ಯೆ ಅವರವರಲ್ಲೇ ಬೈದಾಟ ಕೂಗಾಟಗಳಾದವು. ಡ್ರೈವರಿಂದ ಕಂಡಕ್ಟರಿಗೂ, ಕಂಡಕ್ಟರಿಂದ ಕ್ಲೀನರಿಗೂ, ಕ್ಲೀನರಿಂದ ಡ್ರೈವರಿಗೂ ಸಾಮಾನುಗಳ ಎಸೆದಾಟವಾಯಿತು. ಬಸ್ಸಿನಮೇಲೆ ಆ ಮೂವರ ಪ್ರಯೋಗ ಜಾಸ್ತಿಯಾದಂತೆಲ್ಲಾ ನಮಗೂ ಕುತೂಹಲ ಹೆಚ್ಚಿತು. ಎಲ್ಲ ಕಾರ್ಯಕ್ರಮವೂ ಮುಗಿಯಬೇಕಲ್ಲ–ಆ ಬಸ್ಸಿನ ರಿಪೇರಿಯೂ ಮುಗಿದು ಡ್ರೈವರ್, ಕಂಡಕ್ಟರ್, ಕ್ಲೀನರ್ ತಮ್ಮ ತಮ್ಮ ಸ್ಥಾನಕ್ಕೆ ಸೇರಿದರು. ನಾವೂ ನಮ್ಮ ವಾಹನಗಳನ್ನು ತೆಗೆದುಕೊಂಡು ಹೊರಡುವುದಕ್ಕೆ ತಯಾರಾದೆವು. ಇದ್ದಕ್ಕಿದ್ದ ಹಾಗೇ ಆ ಬಸ್ಸು ಒಂದು ಬಾರಿ ಘರ್ಜಿಸಿ, ಮೂರು ಬಾರಿ ಕುಪ್ಪಳಿಸಿ, ಹಿಂದು ಮುಂದು ಹೊಗೆಯಾಡಿ ಆರ್ಭಟಿಸಿ ರಸ್ತೆ ಅಂಚಿನಲ್ಲಿದ್ದ ಚರಂಡಿಯಲ್ಲಿ ಬುಸುಗುಟ್ಟುತ್ತ ನಿಂತಿತು. ಕಂಡಕ್ಟರ್, ಕ್ಲೀನರ್ ಇಬ್ಬರೇ ಕೆಳಗಿಳಿದರು. ನಮ್ಮಕಡೆ ನೋಡಿದರು ನಾವೂ ನಮ್ಮ ವಾಹನಗಳನ್ನು ಚರಂಡಿಯಲ್ಲಿಳಿಸಿ, ತೋಳುಗಳನ್ನು ಸರಿಪಡಿಸಿಕೊಂಡು ಬಸ್ಸನ್ನು ದಬ್ಬಿದೆವು. ನಾನು, ರಾಜ, ಚಂದಿ, ಕಂಡಕ್ಟರ್, ಕ್ಲೀನರ್ ಎಲ್ಲರೂ ಸೇರಿ ಒಂದು ಫರ್ಲಾಂಗ್ ದೂರದಲ್ಲಿ ಅದನ್ನು ಹತೋಟಿಗೆ ತಂದು ನಿಲ್ಲಿಸಿದೆವು. ಆಗ ಡ್ರೈವರ್ ಕೂಗಿದ—

"ಸಾರ್ – ನೀವೂ ಹತ್ತಿ ಸಾರ್. ನಿಮ್ಮ ಸೈಕಲ್‌ಗಳನ್ನೆಲ್ಲಾ ಟಾಪ್ ಮೇಲ್ಹಾಕಿ" ಅಂದ.

ನನಗೆ ಇಷ್ಟವಿರಲಿಲ್ಲ. ಆ ಬಸ್ಸಿನಲ್ಲಿ ದಬ್ಬೋಕೆ ಜನವಿಲ್ಲದ್ದೂ, ನಾವು ಮೂವರು ಅವನ ಬಸ್ಸನ್ನು ಯಶಸ್ವಿಯಾಗಿ ದಬ್ಬಿದ್ದೂ ಯೋಚಿಸಿ—"ಪರವಾಗಿಲ್ಲ ನಾವು ಹೋಗ್ತೀವೆ" ಅಂದೆ.

ಆದರೆ ರಾಜ ಚಂದಿ ಅಷ್ಟರಲ್ಲೇ ನಮ್ಮೆಲ್ಲರ ವಾಹನಗಳನ್ನೂ ಹೊತ್ತುತಂದು ಆ ಬಸ್ಸಿನ ಟಾಪ್‌ಮೇಲೆ ಎಸೆದಿದ್ದರು. ನಾನೂ ಅವರ ಜೊತೆಗೆ ಆ ಬಸ್ಸಿನ ಜಠರದೊಳಕ್ಕೆ ಹೊಕ್ಕೆ. ತುಸದೂರ ಕೂಡ ಹೋಗಿಲ್ಲ — ಬಸ್ಸಿನ ಟಾಪೇ ಹಾರಿಹೋಗ

ಹಾಗೆ ಶಬ್ದವಾಯಿತು! ನನ್ನ ಶರೀರವನ್ನು ಕಂಡಕ್ಟರ್ ಅಂಗಗಳಿಂದ ಬಿಡಿಸಿಕೊಂಡು, ಧೈರ್ಯಮಾಡಿ ಬಸ್ಸಿನ ಕಂಡಿಯಿಂದ ತಲೆ ಹೊರಗೆಹಾಕಿ ನೋಡಿದೆ. ನನ್ನ ಜಾತಕ ಬಲ — ತಲೆ ಒಂದು ಮರದ ಕೊಂಬೆಗೆ ಜಖಂ ಆಗುವುದರೊಳಗಾಗಿ ಒಳಗೆ ಎಳೆದು ಕೊಂಡೆ. ಉಸಿರು ಎದೆಯೊಳಕ್ಕೆ ವಾಪಸ್ ಬರುವುದಕ್ಕೆ ಐದು ನಿಮಿಷವಾಯ್ತು. ಆಮೇಲೆ ಜ್ಞಾಪಕ ಬಂತು—ಬಸ್ಸಿನ ಮೇಲಿಂದ ಹಾರಿಹೋದದ್ದು ಟೋಪಲ್ಲ—ನಮ್ಮ ಸೈಕಲ್‌ಗಳು! ರಾಜ ಚಂದಿ ಇಬ್ಬರಿಗೂ ಇನ್ನೂ ಏನೂ ಗೊತ್ತಿಲ್ಲ. ಬಹಳ ಹುಮ್ಮಸ್ಸಿನಿಂದ ಕಂಡಕ್ಟರ್ ಜೊತೆಯಲ್ಲಿ ಚಕ್ಕಂದ ಹೊಡೀಯತ್ತಿದ್ದಾರೆ. ನಿಜಸ್ಥಿತಿ ಆವರಿಗೆ ತಿಳಿಸಿದೆ. ಮೂವರೂ ಒಂದೇ ಉಸುರಿನಲ್ಲಿ ಕಂಡಕ್ಟರಿಗೆ ಡ್ರೈವರಿಗೆ ಕಿರುಚಿಕೊಂಡೆವು. —'ಬಸ್ಸು ನಿಲ್ಲಿಸಿರೊ!' ಅಂತ.

ಅದಕ್ಕೆ ಡ್ರೈವರ್ "ಸಾರ್ - ನೀವೇ ಯೋಚನೆಮಾಡಿ-ಇದು ಎಷ್ಟು ಶ್ರಮ ಪಟ್ಟಮೇಲೆ ಹೊರಟಿದೆ ಅಂತ! ಇದರಲ್ಲಿ ಹತ್ತಿದ ಪ್ರಯಾಣಿಕರೆಲ್ಲಾ ಆಗಲೇ ಅವರ ದುಡ್ಡೂ ವಾಪಸ್ ಕೇಳದೆ ಹೊರಟ್ಹೋದರು-ಅಷ್ಟು ಬೇಜಾರುಮಾಡಿತ್ತು. ಈಗ ಒಳ್ಳೆ ಐರಾವತ ಓಡಿದಂಗೆ ಹೋಗ್ತಾ ಇದೆ. ನೀವು ನಿಲ್ಸು ಅಂತೀರಲ್ಲಾ ನ್ಯಾಯವೋ?" ಅಂದ.

"ಅಯ್ಯೋ ಪಾಪ!" ಅಂದೆ—ಇಂಪ್ರನಿಗೆ!—ತಕ್ಷಣ ರೇಗಿತು.

"ನಿನ್ನ ಬಸ್ಸಿಗೆ ಇಷ್ಟು....!?! ನಮ್ಮ ಸೈಕಲ್‌ಗಳೆಲ್ಲಾ ಒಂದುಮೈಲಿ ಹಿಂದೆ ಬಿದ್ದಿವೆ. ನೀನು ನಿನ್ನ ಮೂಗಿನ ನೇರಕ್ಕೇ ಮಾತಾಡ್ತಿದೀಯಲ್ಲಾ—ಅಯ್ಯಾ ದಯವಿಟ್ಟು ಬೇಗ ನಿಲ್ಲಿಸು" ಅಂದೆ ತುಸ ಗರಂಮ್ಮಾಗಿ.

"ಆಗಲಿ ಸಾರ್" ಅಂದ....

ಬಸ್ಸು ನಿಲ್ಲಲಿಲ್ಲ.

"ಸಾರ್—ನನ್ನ ಬುದ್ಧಿಯೆಲ್ಲಾ ಖರ್ಚಾಯಿತು. ನೀವೇ ಈ ಬಸ್ಸನ್ನು ನಿಲ್ಲಿಸಬೇಕು. ನೀವೇ ಏನಾದರೂಮಾಡಿ ಇದನ್ನು ನಿಲ್ಲಿಸಿ, ನನ್ನೂ ಬಿಡುಗಡೆ ಮಾಡಿದರೆ—ಪ್ರಮಾಣ ಮಾಡ್ತೇನೆ—ಈ ಕೆಲಸಕ್ಕೆ ಪುನಹ ಕೈಹಾಕೊಲ್ಲ. ನಂಗೂ ಹೆಂಡತಿ ಮಕ್ಕಳು ಮುದಿತಾಯಿ "

ಚಂದಿ ಡ್ರೈವರ್ ಬಾಯಿ ಮುಚ್ಚಿದ. ಆತ ತನ್ನ ಜಾಗವನ್ನೇ ಬಿಟ್ಟು ಹಿಂದಕ್ಕೆ ಹಾರಿ ನನ್ನನ್ನು ತಬ್ಬಿಕೊಂಡ. ನಾನು ನನ್ನ ಕಣ್ಣು ಮುಚ್ಚಿಕೊಂಡೆ. ಎರಡು ನಿಮಿಷ — ನನ್ನ ಬಾಲ್ಯ, ವಿದ್ಯಾಭ್ಯಾಸ, ಆಟಪಾಠ, ಮದುವೆ, ಕಷ್ಟ— ಎಲ್ಲಾ ನನ್ನ ಕಣ್ಣುಮುಂದೆ ಕುಣಿದವು. ಬಸ್ಸು ಬುಸುಗುಟ್ಟುತ್ತ ಚರಂಡಿಯಲ್ಲಿ ನಿಂತಿತು.

ನಾನು ರಾಜ ಚಂದಿ ಆ ಚರಂಡಿಗೆ ಸಾಷ್ಟಾಂಗ ನಮಸ್ಕರಿಸಿ ನಮ್ಮ ವಾಹನಗಳ ಕಳೇಬರವನ್ನು ಹುಡುಕುತ್ತ ಓಡಿದೆವು.

ರಾಜ ಅಂದ —"ಲೋ ಅದ್ಯಾವುದೋ — ಆ ಬಸ್ಸು?" ಅಂತ.

ಹಿಂದಿರುಗಿ ನೋಡಿದೆ — ಆ ಭೂತಕ್ಕೆ ಸಾಕ್ಷಾತ್ ಈಶ್ವರನ ಹೆಸರು!

ಇವಕ್ಕೇ ಇರಬೇಕು — ಪುರಂಧರದಾಸರು ಹಾಡಿದ್ದು "ಯಾರು ಬದುಕಿದರಯ್ಯಾ ಹರಿ ನಿನ್ನ ನಂಬ" ಅಂತ.

—"ಕೇಫ"

---



ತಿರುಪತೀಗೇ ಯಾಕೆ ಹೋಗ್ಬೇಕು ಬುದ್ಧೀ!
ಇಲ್ಲೇ ಇಲ್ವಾ ಬೋಳಾಚೇ!

# ಯಾರಾದರೇನು?

ಆತನೊಬ್ಬ ಗೃಹಸ್ಥ. ಯಾವ ಕಾನೂನನ್ನೂ ಎಂದಿಗೂ ಮೀರಿ ನಡೆದವನಲ್ಲ. ತನ್ನ ಕೆಲಸ—ತನ್ನ ಜೀವನ ಹೀಗೇ ಇರಲು ಒಂದು ದಿನ ಸಮಸ್ತಪ್ರಾಣಿವರ್ಗಕ್ಕೂ ಒದಗುವಹಾಗೆ ಆತನಿಗೂ ತುಸ ಶರೀರಕ ಅಸ್ವಸ್ಥತೆ ಒದಗಿತು. ಆತ ಮೊದಲಿಂದಲೂ ತನ್ನ ಶರೀರದ ವಿಷಯದಲ್ಲಿ ನಾಜೋಕು, ಹುಷಾರು. ಒಡನೆಯೇ ತನ್ನ ವೈದ್ಯರ ಸಲಹೆ ಕೇಳಿದ. ವೈದ್ಯರು ಅವನನ್ನು ಕ್ರಮವಾಗಿ ಪರೀಕ್ಷೆಮಾಡಿ ತಮ್ಮ ಔಷಧಿ ಪಥ್ಯಗಳ ಜೊತೆಗೆ ತುಸ ಮದ್ಯವನ್ನು ಸೇವಿಸುವಹಾಗೆ ಸಲಹೆ ಇತ್ತರು. ಆತನಿಗೆ ವೈದ್ಯರ ವಾಕ್ಯವೆಂದರೆ ವೇದವಾಕ್ಯ. ಔಷಧಿ ಪಥ್ಯಗಳು ಮುಗಿದವು. ಮದ್ಯಪಾನ ನಿಂತಿತು. ತುಸ ದಿನಗಳಲ್ಲಿ ಹೆಚ್ಚಿತು. ಆತನಮೇಲೆ ಮದ್ಯದ ಪರಿಣಾಮವೂ ಹೆಚ್ಚಿತು. ಮನೆಗೆ ಬರುವಾಗ ಬಾಗಿಲನ್ನು ಝಾಡಿಸುವ, ಕುರ್ಚಿ ಮೇಜುಗಳನ್ನು ಒದೆಯುವ, ಮಹಡಿ ಮೆಟ್ಟಿಲಿನಮೇಲೆ ತಲೆಕೆಳಗಾಗಿ ಬಿದ್ದು ಸುಸ್ತಾಗಿ ನೆಲದಮೇಲೆ ಉರುಳಿ ಮಲಗುವ. ಇದನ್ನು ನೋಡಿ ಆತನ ಹೆಂಡತಿ ಮಕ್ಕಳು ಕಣ್ಣೀರು ಸುರಿಸಿದರು.

ಕೆಲವು ದಿನಗಳು ಕಳೆದಮೇಲೆ ಆತನ ತಪ್ಪು ಆತನಿಗೆ ತಿಳಿಯಿತು. ಮದ್ಯಪಾನವನ್ನು ಪೂರ್ತಿಯಾಗಿ ಬಿಟ್ಟ. ಪಾನನಿರೋಧ ಛಳುವಳಿಯಲ್ಲಿ ತಾನೇ ಮುಂದಾಳಾಗಿ ನಿಂತು ಬಹಳ ಯಶಸ್ವಿಯಾಗಿ ವಾದಿಸಿದ. ಮದ್ಯಪಾನವು ತನ್ನಮೇಲೆ ತೋರಿಸಿದ್ದ ಪರಿಣಾಮವನ್ನೂ, ತಾನು ಮದ್ಯಪಾನವನ್ನು ಬಿಟ್ಟಮೇಲೆ ಗಳಿಸಿದ ಸುಖವನ್ನೂ ವರ್ಣಿಸಿದ ಈಗ ಆತನಿಗೆ ಆರೋಗ್ಯ ಹೆಚ್ಚಿದೆ. ಸಂತೋಷ ಹೆಚ್ಚಿದೆ. ಶಕ್ತಿಯು ಹೆಚ್ಚಿದೆ. ತನ್ನ ಶಕ್ತಿಯನ್ನು ಎಲ್ಲರಿಗೂ ಪ್ರದರ್ಶನ ಮಾಡುತ್ತಾನೆ. ಮನೆಗೆ ಬರುವಾಗ ಬಾಗಿಲನ್ನು ಝಾಡಿಸುತ್ತಾನೆ ಕುರ್ಚಿ ಮೇಜುಗಳನ್ನು ಒದೆಯುತ್ತಾನೆ. ಮಹಡಿ ಮೆಟ್ಟಲಿನಮೇಲೆ ತಲೆಕೆಳಕಾಗಿ ಹತ್ತುತ್ತಾನೆ. ಸುಸ್ತಾಗಿ ಮಲಗುತ್ತಾನೆ. ಇದನ್ನು ನೋಡಿ ಆತನ ಹೆಂಡತಿ ಮಕ್ಕಳು ಕಣ್ಣೀರು ಸುರಿಸುತ್ತಾರೆ.

**ನೀತಿ:**—ವಿಪರೀತ ಹಿಂದಕ್ಕೆ ವಾಲುವುದಕ್ಕಿಂತ ತುಸ ಮುಂದಕ್ಕೆ ಬಗ್ಗಿದರೆ ಕ್ಷೇಮ.

[ಜೇಮ್ಸ್‌ಥರ್ಬರ್ ರವರ ಒಂದು ಕಥೆಯ ಆಧಾರ] "ಕೇಫ"

# "ಎಲ್ಲಾ ಒಳ್ಳೇದಕ್ಕೇಂತ"

ಗುಮಾಸ್ತೆ ಗುಂಡಣ್ಣ ಮನೆಗೆ ಬಂದಾಗ ಸಂಜೆ ಐದೂವರೆಯಾಗಿತ್ತು. ಸವೆದು ಹೋದ ಚಪ್ಪಲಿಗಳನ್ನು ಮೂಲೆಗೆ ಎಸೆದು ಕೋಟನ್ನು ಗೂಟಕ್ಕೆ ನೇತುಹಾಕಿ ಮಂದಲಿಗೆಮೇಲೆ ಬಿದ್ದುಕೊಂಡ. "ಕಾಫಿ" ಅಂತ ಒಂದೇ ಉಸಿರಿನಲ್ಲಿ ಕೂಗಿದ. 'ಕಾಫಿ' ಅನ್ನೊ ಪದ ಕೇಳಿ ಅಡಿಗೆಮನೇಲಿದ್ದ ಕೆಂಗಣ್ಣಿನ ರಂಗಮ್ಮನೋರು ತೊಟ್ಟಿಯಲ್ಲಿ ಪ್ರತ್ಯಕ್ಷವಾದರು.

"ಅಲ್ಲಾ, ಕಾಫಿ ಕೇಳೊಕ್ಕೆ ಅದೆಷ್ಟು ಧೈರ್ಯ ಅಂತ. ಮೊನ್ನೆ ಇಂದ ಒಂದೇ ಸಮನಾಗಿ ಹೇಳ್ತಾ ಇದೀನಿ ಮನೇಲಿ ಸಕ್ಕರೆ ಇಲ್ಲ, ಕಾಫಿಬೀಜ ಇಲ್ಲಾಂತ; ಒಂದು ಸಲನಾದರೂ ಕಿವಿಮೇಲೆ ಹಾಕ್ಕೊಂಡರ ಹೇಳಿ? ಕಾಯಿಲೆ ಮಗೂಗೆ ಒಂದು ತೊಟ್ಟು ಹಾಲಿಲ್ಲ. ಅಂಬಲಿಯೊ ತುಂಬೇ ಸೊಪ್ಪೊ ಅಂತ ಅನ್ನೊ ಅಷ್ಟು ಸುಲಭವಲ್ಲಾ ಬಡತನ ಅನ್ನೋದು, ಅಂತ ಈಗ ಅರ್ಥವಾಯಿತೇ?" ಅಂತ ಪಟಪಟನೆ ಒದರಿದರು ರಂಗಮ್ಮನೋರು.

"ಅಯ್ಯೊ ರಾಮ! ಒಂದು ಲೋಟ ಕಾಫಿ ಕೇಳಿದರೆ ಅದೆಷ್ಟು ಮಾತಾಡ್ತಿಯೆ? ಲೇಟಾಗಿ ಹೋಟ್ಲಿಗೆ ಹೋದರೆ ಮಾಣಿ ಮರ್ಯಾದೆಯಾಗಿ 'ಕಾಫಿ ಇಲ್ಲ' ಅಂತ ಅನ್ನೋ ಹಾಗೆ ಅನ್ನಬಾರದೆ? ಅದ್‌ಬಿಟ್ಟು ಸುಮ್ಮನೆ ಮಾತಾಡಿ ಆಡಿ ಬೇಜಾರ್ ಹತ್ತಿಸ್ತಿಯಲ್ಲಾ. ಆ ರಾಜನ ಕತೆ ಜ್ಞಾಪಿಸಿಕೊಳ್ಳೆ. 'ಎಲ್ಲಾ ಒಳ್ಳೆದಕ್ಕೆ'ಂತ ಈ ಬಡತನಾನೂ ಒಳ್ಳೇವಕ್ಕೆ ಅಂತ ಅನ್ಕೊ".

"ಸಾಕಪ್ಪಾ ಸಾಕು ಈ ಸುಳ್ಳು ರಾಮಾಯಣ ಕೇಳೋರು ನಕ್ಕಾರು. ನಿಮ್ಮನ್ನ ಕೇಳಿ, ನಮ್ಮ ಕೋಮಲಂಗೆ ಕುಂಟಾಗಿರೋದು, ಪಾಪುಗೆ ಆರ್ ಬೆರಳಿರೊದು, ಕಿಟ್ಟಿಗೆ ತುಟಿ ಹರ್‌ದಿರೊದು, ನಿಮಗೆ ಸಂಪಾದನೆ ಇಲ್ಲದಿರೊದು, ಎಲ್ಲಾ ಒಳ್ಳೇದೆ ಅಂತಿರ. ಅನ್ನೋಕೆ ಏನ್‌ಹೇಳಿ. ಅನುಭವಿಸೋರಿಗೆ ಕಷ್ಟ ಅಷ್ಟೆ."

"ಅಂದಹಾಗೆ ಈಗ ಜ್ಞಾಪಕಕ್ಕೆ ಬರುತ್ತೆ ವರದಾಚಾರಿ ಹೇಳಿದ ವಿಚಾರ"

"ಯಾರು? ೧೬೦೦ರೂ ಸಂಬಳ ಬರುತ್ತಲ್ಲಾ ಆ ಸುಂದರಮ್ಮನ ಗಂಡ ವರದಾಚಾರಿನೇ? ಅವರನ್ನ ಬಿಡಿ. ಅಷ್ಟು ಉಗ್ಗಾದರೂನೂವೆ ಕೈತುಂಬ ಸಂಬಳ ಬರುತ್ತೆ. ಸ್ವಲ್ಪವೂ ಅಹಂಕಾರವಿಲ್ಲ, ಪಾಪ ನಿಮ್ಮನ್ನೂ ಮಾತಾಡಿಸ್ತಾರೆ, ಆ ಉಗ್ಗು ಒಂದಿಲ್ಲದಿದ್ದರೆ ಎಷ್ಟು ಚೆನ್ನಾಗಿರ್ತಿತ್ತೂ ಅಲ್ವೆ?"

"ನೋಡದ್ಯಾ, ಅದನ್ನೆ ನಾ ಹೇಳುಕ್ಕೆ ಬಂದಪ್ಪು. ಮೊನ್ನೆ ಕಛೇರಿಯಿಂದ ಬರುವಾಗ ಮಳೆ ಬರೋಹಾಗಿತ್ತು. ಬೇಗ ಮನೆ ಸೇರ್ಕೊಳ್ಳೋಣ ಅಂತ ಬೇಗ ಬೇಗ ಬರುತ್ತಿದ್ದಾಗ ವರದಾಚಾರಿಮನೆ ಸಿಕ್ಕಿತು. ಅವನು ಹೊರಗೆ ತೋಟದಲ್ಲಿ ನಿಂತಿದ್ದ. ನನ್ನೋಡಿ ಏಏನ್ ಗುಗುಗ್ಗುಂಡು ಸಮಾಚಾರ" ಅಂತ ಉಗ್ಗೊಂಡೆ ಮಾತಾಡಿಸುಕ್ಕೆ ಶುರುಮಾಡಿ ಹಾಗೆ ಒಳಕ್ಕೆ ಕರೆದುಕೊಂಡು ಹೋದ. ಸರಿ, ಅವನ ಸಂಬಳಕ್ಕೆ ತಕ್ಕಹಾಗಿದೆ ಮನೆ. ಆಳುಕಾಳು ಎಲ್ಲ, ಅಡಿಗೆಯವನು ಬಿಸಿಬಿಸಿ ಬೋಂಡ ಕಾಫಿ ತಂದುಕೊಟ್ಟ, ಬೇಡ ಬೇಡ ಅಂತ ಹೇಳ್ತಾನೇ ಪೂರ್ತಿ ಮುಗಿಸಿದೆ. ಹಾಗೆ ಮಾತ' ಮಾತು ಆಡ್ತಾ ಕಷ್ಟಸುಖ ಹಾಡ್ಕೊತಾ ಇದ್ದೆವು. ನಾನೂ ಹೇಳ್ಕೊಂಡೆ ನನ್ನ ಸಂಸಾರ, ನನ್ನ ಅಧಿಕಾರಿ ಕೊಡೊ ಕಿರುಕುಳ, grade ಕೊಟ್ಟಿಲ್ಲಪೇ ಇರೋದು ಇತ್ಯಾದಿ ವಿಷಯಗಳನ್ನ. ಆಗವ ಹೇಳಿದ "ಇ ಇ ಇಲ್ಲಾ ಕ ಕ್ಯಣೊ ಗುಗುಗ್ಗುಂಡು ಹಾಹಾಗಗ್ಗನ್ನ ಬೇಡ. ಎಎಎಲ್ಲಾ ಒಒಒಳ್ಳೆದಕ್ಕೆ. ನನ್ನ ಉಉಉಗ್ಗು ಕೂಡ ನನನಗೆಷ್ಟು ಸಸಸ್ಸಹಾಯ ಮಮಮಾಡ್ತು ಅಂತೀ, ೯೯೯ very thi thi thing iis fa fa for the be best" ಅಂತ ಅಂದ. ನನಗೆ ಆಶ್ಚರ್ಯವಾಯಿತು. ಅದ್‌ಹ್ಯಾಗೊ? ಅಂತ ಅಂದೆ. "ಅಅದ್ ಹಿಹಿಹೇಗೆ" ಅಂತ ಶುರುಮಾಡಿದ ವರದಾಚಾರಿ.

ತಿಂಗಳಹಿಂದೆ ವರದಾಚಾರಿ ಒಂದು ಶನಿವಾರ ಕೂತ್ತಿದ್ದನಂತೆ ಆಫೀಸಿನಲ್ಲಿ. ಜವಾನ ಬಂದು "ಸ್ವಾಮಿ, ಯಾರೊ ಅಮ್ಮಾವ್ರು ಬಂದಿದ್ದಾರೆ ಕಾಣಾಗೆ ಅಂತ ಹೇಳಿ ಒಂದು visiting card ಕೊಟ್ನಂತೆ. visiting card ಮೇಲೆ ಇತ್ತು ಆ ಊರಿನ ಪ್ರಮುಖ ವ್ಯಕ್ತಿಗಳಲ್ಲಿ ಒಬ್ಬರಾದ ಶ್ರೀಮತಿ ಕೇಸರಿ ಮೊದಲ್‌ಯಾರ್ ರವರ ಹೆಸರು. ಒಳಕ್ಕೆ ಬರಹೇಳಿದ, ವರದಾಚಾರಿ. ಕಣ್ಣು ಆಕಡೆ ಹೊರಳಿಸು ತ್ತಿದ್ದಹಾಗೆ ೫ ಅಡಿ ೩ ಅಂಗುಲದ, ಕೃಷ್ಣವರ್ಣದ, ಸುಮಾರು ೫೫-೬೦ರ ಮುದುಕಿ ಯನ್ನು ಕಂಡ ವರದಾಚಾರಿ. ಕೈಲಿ ಅವಳ ಬಣ್ಣದ್ದೆ ಒಂದು ದೊಡ್ಡ ಬುತ್ತಾಬೇರೆ. ಬಂದ ವ್ಯಕ್ತಿ ಬಾಗಲಲ್ಲಿ ನಿಂತು "ನಮಸ್ತೆ" ಅಂತು. ವರದಾಚಾರಿ ಎದ್ದು ಆಕೆಗೆ ಕೂರಲು ಸೊಫಾ ತೋರಿಸಿದ. "ಬಬಬ್ಬಂದ್ ಕಕಕಾರಣ ತಿತಿತ್ತಿಳಿಬೋದೆ?" ಎಂದು ಕೇಳಿದ ವರದಾಚಾರಿ. ಬಂದ ಆಸಾಮಿ ಮುದುಕಿ, ಮೇಲಾಗಿ ಕಾರ್ಯ ವಾಸಿ... ಪಾಪ ಅವನ ಬಿಕ್ಕಲನ್ನು ಕಂಡು ನಗಲಿಲ್ಲವಂತೆ. ಆಕೆ ಹೇಳಿದಳಂತೆ, 'ನಾವು ಒಂದು ಸ್ತ್ರೀಸಮಾಜವನ್ನು ಸ್ಥಾಪಿಸಬೇಕೆಂದಿದ್ದೇವೆ. ಅಲ್ಲಿ ಹೊಲಿಗೆ, ಹಾಡು ನೃತ್ಯ, ಹಿಂದಿ ಇತ್ಯಾದಿಗಳನ್ನು ಹೇಳಿಕೊಡುತ್ತಾರೆ ಎಲ್ಲಕ್ಕೂ ಬಹಳ ಕಡಿಮೆದರ. ಅದು ಕೇವಲ ಬಡ ಹೆಣ್ಣುಮಕ್ಕಳಿಗಾಗಿಯೇ. ಅದರ ನಿಧಿಗಾಗಿ ಮುಂದಿನ ವಾರ Town hall ನಲ್ಲಿ ಒಂದು ನೃತ್ಯ ಪ್ರದರ್ಶನವಿದೆ' ಎನ್ನುತ್ತಾ ಆಕೆ ಆ hand bag ನಿಂದ ಒಂದು ನ್ಯೂಸ್ ಪೇಪರ್ ಚೂರನ್ನು ತೆಗೆದಳಂತೆ. ಅದರಲ್ಲಿ ಒಂದು ಕರೀ ಗುಜ್ಜಾನೆಮರಿ ನೃತ್ಯ ಭಂಗಿಯಲ್ಲಿರುವ ಫೋಟೊ ಇತ್ತಂತೆ. ವರದಾಚಾರಿಗೆ

ಎಲ್ಲಾ ಅರ್ಥವಾಯಿತು. ಸರಿ, ಈ ಆನೆಮರಿಯ ಕುಣಿತಕ್ಕೆ ನಾನು ಟಿಕೆಟ್ ತೆಗೆಸುಕೋಬೇಕಲ್ಲಾ ಅಂತ ಭಯವಾಯಿತಂತೆ. ಆ ಮುಖ ನೋಡಲಾರದೆ ಅವ ಅಂದನಂತೆ "ಅಅಅಲ್ಲ ತಾತ್ತಾಯಿ, ಈ ಈ ಈ ಗುಗುಗ್ಗು ಜ್ಜಾಜ್ಜಾ ......." ಅಷ್ಟರಲ್ಲಿ ಆಕೆ ಇವನ ಕಷ್ಟ ನೋಡಲಾರದೆ ಆ ಫೋಟೋವಿನ ವಿಚಾರವನ್ನು ವಿವರಿಸಿದಳಂತೆ. "ಇದು ನನ್ನ ಮಗಳು ಅರುಂಧತಿಯ ಚಿತ್ರ. ಅವಳಿಗೆ ಬಾಲ್ಯದಿಂದಲೂ ನೃತ್ಯದಲ್ಲಿ ಅಭಿರುಚಿ. ಕೇವಲ ೬ ವರ್ಷದವಳಿದ್ದಾಗಲೇ ನೃತ್ಯವನ್ನು ಅಭ್ಯಾಸ ಮಾಡಲು ಶುರುಮಾಡಿದಳು. ಮುಂದಿನವಾರ ಇವಳದೇ ಭರತನಾಟ್ಯ ಇರೋದು Town hall ನಲ್ಲಿ ಅವಳು ಕುಣಿಯುವುದು ಕೇವಲ ಸಹಾಯಾರ್ಥಕ್ಕೇಂತ. ಅದಕ್ಕೆ ನೀವು ದಯವಿಟ್ಟು ಸಹಾಯಮಾಡಬೇಕು" ಅಂತ.

ಬದುಕಿತಲ್ಲಾ ಬಡಜೀವಿ, ರಾಮ! ಇನ್ನೊಂದು ನಿಮಿಷ ಇದ್ದಿದ್ದರೆ ಅವಳೆದುರಿಗೇನೆ ಅವಳ ಮಗಳನ್ನು 'ಈ ಗುಜ್ಜಾನೆಮರಿಯ ಕುಣಿತಕ್ಕೆ ಏಕೆ ಅಷ್ಟು ದುಡ್ಡು ಸುರೀಬೇಕು' ಅಂತ ಅಂದುಬಿಡುತ್ತಿದ್ದನಲ್ಲಾ ಅಂತ ಅಂದ್ಕೊಂಡನಂತೆ.

ಅಂತೂ ಇಷ್ಟಾಭಾಸಾನ ತಪ್ಪಿಸಿದಕ್ಕೆ, ಆಫೀಸ್ ಬಾಗಿಲಿಗೆ ಬಂದದ್ದಕ್ಕೆ, ಗಂಡಾಂತರ ತೊಲಗಲಿ ಅಂತ ವರದಾಚಾರಿ ೧೫೦ ರೂನ ಒಂದು ಚೆಕ್ ಬರೆದು ಕೊಟ್ಟುಕಳುಹಿಸಿದನಂತೆ.

ಇದನ್ನ ಹೇಳಿ ವರದಾಚಾರಿ ಅಂದ 'ಮೊಮೊಮ್ಮೊದಲೆಲ್ಲಾ ನಾನಾನು ಉ ಉಉಗ್ಗು ಇಇಇಲ್ಲದಿದ್ದರೆ ಎಎಎಷ್ಟು ಚೆಚೇನ್ನಾಗಿರ್ತಿತ್ತು ಅಅಂತ ಅನ್ಕೊತ್ತಿದ್ದೆ, ಆಆಆದ್ರೆ ಈಈಗ ಅಅನ್ನಿಸುತ್ತೆ ಎಎಲ್ಲಾ ಒಒಒಳ್ಳೆದಕ್ಕೇಂತ, ನನ್ನ ಉಉಗ್ಗು ನನ್ನ ಮಮಮಾನಾನ ಕಕಕಾಪಾಡ್ತು. ಹಾಹಾಹ್ಹಾಗೇನೆ ನಿನ್ನ ಪಪಪ್ಪರೀಸ್ಥಿತಿನ ತೆತೆತೆಗಳಬೇಡ ಅಅಅದೂ ಒಒಒಳ್ಳೆದಕ್ಕೆ ಇರಬಹುದು' ಅಂತ ಅಂದ.

"ಹೌದು" ಎಂದು ತಲೆಯಾಡಿಸಿದೆ.

ಅದಕ್ಕೆ ನಾನಿಂಗೆ ಹೇಳಿದ್ದು ಸುಮ್ಮನೆ ಏಕೆ ಬಡತನ ಅಂತ ಬಡ್ಕೋತಿ. ಅದೂ ಒಳ್ಳೆದಕ್ಕೇ ಇರಬಹುದು ಅಂತ ಅಂದ ಗುಂಡಣ್ಣ.

ರಂಗಮ್ಮನಿಗೆ ಅವನ ಮಾತು ಸ್ವಲ್ಪ ದಿಟವಾಗಿ ತೋರಿತೋ ಏನೋ "ಅದು ಹೇಗಾದರೂ ಆಗಲಿ, ಪಾಪ ಇಷ್ಟೊತ್ತು ಕಾಫಿನೂ ಇಲ್ಲದೆ ಒದರಿದ್ದಕ್ಕೆ ಒಂದು ಲೋಟ ಮಜ್ಜಿಗೇನಾದರೂ ತರ್ತಿನೀ" ಅಂತ ಹೇಳಿ ಅಡಿಗೆ ಮನೆಗೆ ಹೊರಟರಂತೆ.

"ಅವನ ಉಗ್ಗಿನಿಂದ ಅವನು ಬದುಕಿಕೊಂಡ, ಆ ವಿಚಾರ ಹೇಳಿ ನಾನು ಒಂದು ಲೋಟ ಮಜ್ಜಿಗೆ ಗಿಟ್ಟಿಸಿದೆನಲ್ಲಾ, ಅಷ್ಟೆಸಾಕು" ಅಂತ ಸಮಾಧಾನ ಪಟ್ಕೊಂಡನಂತೆ. ಗುಂಡಣ್ಣ.

ಕು| ಲೀಲಾ

# ನನ್ನ ಗುಟ್ಟು

"ಹೇಗಿರಿ ನೀವು ಈ ವಯಸ್ಸಿನಲ್ಲಿ ಇಷ್ಟು ಘಟ್ಟಿಮುಟ್ಟಾಗಿದೀರಿ?" ಎಂದು ನನ್ನನ್ನು ಅನೇಕರು ಕೇಳುತ್ತಿದಾರೆ, ಕಂಡ ಕಡೆಯಲ್ಲೆಲ್ಲ. ಅವರಿಗೆಲ್ಲ ಉತ್ತರ ಹೇಳಿ ಹೇಳಿ ನನ್ನ ಆಯುಷ್ಯ ಕಡಿಮೆಯಾಗುತ್ತಾ ಇದೆ. ಆದ್ದರಿಂದ, ಈ ಮೂಲಕ ಉಳಿದ ಎಲ್ಲರಿಗೂ ನನ್ನ ಉತ್ತರವನ್ನು ತಿಳಿಸಿಬಿಡುತ್ತೇನೆ. ಇನ್ನುಮುಂದೆ ಯಾರೂ ನನ್ನನ್ನು ಪೀಡಿಸಬಾರದಾಗಿ ಬೇಡುತ್ತೇನೆ.

ಮೊದಲನೆಯದಾಗಿ, ನಾನು ಹುಟ್ಟಿದ್ದೇ ೧೯೦೦ ರಲ್ಲಿ. ನಾನು ಇಪ್ಪತ್ತನೆಯ ಶತಮಾನದವನು. ನಾನು ಬಲಾಢ್ಯನಾಗಿರುವುದಕ್ಕೆ ಇದು ಮುಖ್ಯಕಾರಣ.

ಆಮೇಲೆ, ಮೊದಲ ನಾಲ್ಕೈದುವರ್ಷಗಳಲ್ಲಿ ನಾನು ದಿನಕ್ಕೆಂಟೊಂಬತ್ತು ಗಂಟೆ ಚೆನ್ನಾಗಿ ನಿದ್ದೆಮಾಡುತ್ತಿದ್ದೆ. ಹತ್ತುಹದಿನೈದುವರ್ಷಗಳವರೆಗೆ, ಬೀಡಿ ಸಿಗರೇಟು ನಶ್ಯ ಇತ್ಯಾದಿ ಸೇವಿಸಲೇ ಇಲ್ಲ. ಅಚ್ಚಿನ ಪುಸ್ತಕಗಳನ್ನೋದಿ ದೃಷ್ಟಿ ಕೆಡಿಸಿಕೊಳ್ಳಲಿಲ್ಲ. ಇಪ್ಪತ್ತು ವರ್ಷವಾಗುತ್ತಲೂ, ನನ್ನ ತೀರ್ಥರೂಪರು, ದೀರ್ಘಾಯುಷ್ಯಕ್ಕೆ ಮೈಬಗ್ಗಿ ಕೆಲಸಮಾಡುವುದೇ ಏಕಮಾತ್ರ ಉಪಾಯವೆಂದು ಹೇಳುತ್ತ, ನನ್ನನ್ನ ಒಂದು ಗುಮಾಸ್ತೆ ನೌಕರಿಗೆ ಹಚ್ಚಿದರು.

ಆಗ, ನನ್ನ ಕೈಗೆ ಒಂದು ಗ್ರಂಥ ಬಂತು. ಅದರಲ್ಲಿ, ೧೧೯ ವರ್ಷ ವಯಸ್ಸಿನ ಒಬ್ಬ ಮುದುಕನ ಫೋಟೋವನ್ನು, ಅವನ ಎಂಟನೆಯ ಹೆಂಡತಿಯೊಂದಿಗೆ ಅಚ್ಚು ಹಾಕಿದ್ದರು. ಆದ್ದರಿಂದ, ಮದುವೆಯೂ ಚಿರಂಜೀವಿತ್ವಕ್ಕೆ ಒಂದು ಸಾಧನವೆನಿಸಿತು. ಅದನ್ನೂ ಸಾಂಗವಾಗಿ ನಡೆಸಿದೆ. ಆ ಮುದುಕ, ತನ್ನ ಹೇಳಿಕೆಯಲ್ಲಿ, "ನಾನು ೧೩ ವರ್ಷ ಕಾರಾಗೃಹವಾಸವನ್ನನುಭವಿಸಿದೆ; ಆಗ ನನಗೆ ಸರ್ಕಾರದವರು ಮಿತಾಹಾರ ವೇಳಾಪಟ್ಟಿಯಂತೆ ದುಡಿಮೆ, ಭೋಜನ, ನಿದ್ದೆ, ಇತ್ಯಾದಿಯನ್ನು ಕಲಿಸಿತು. ಇವೇ ನಾನು ೧೧೯ ವರ್ಷ ಬದುಕಲು ಕಾರಣ" ಎಂದಿದ್ದ.

ಬಹಳ ಪ್ರಯತ್ನಪಟ್ಟು, ಹತ್ತಾರು ಪತ್ತೇದಾರಿ ಕಥೆಗಳನ್ನೋದಿ, ಎಂಟು ಹತ್ತು ಸಿನಿಮಗಳನ್ನು ನೋಡಿ, ನಾನೂ ಕಾರಾಗೃಹದ ಶಿಕ್ಷಣಕ್ಕೆ ಸಿದ್ಧನಾದೆ. ಆದರೆ, ಅದೇಕೊ, ನಾಲ್ಕೇ ನಾಲ್ಕು ವರ್ಷಗಳು ನನಗೆ ಸಾಕೆಂದರು. ಅಲ್ಲಿ ನನ್ನ ವಿಷಯ

ವಲ್ಲಿ ಅಧಿಕಾರಿಗಳು ಹೆಚ್ಚು ಆಸಕ್ತಿ ವಹಿಸಿದಂತೆ ತೋರಲಿಲ್ಲ. ಆದರೂ, ನನ್ನ ತೂಕವನ್ನು ಮಾತ್ರ, ೧೪೫ ರಿಂದ ೧೩೦ ಕ್ಕೆ ಇಳಿಸಿದರು, ಅವರು, ತುಂಬಾ ಪ್ರಯಾಸದಿಂದ.

ಕಾರಾಗೃಹದಿಂದ ಹೊರಕ್ಕೆ ಬಂದಾಗ, ಅದನ್ನು ನೆನೆದು, ಅದೇ ಗೀಳುಹತ್ತಿ, ನನಗೆ ಚಿಂತೆ ಹತ್ತಿತು. ಚಿಂತೆ ಒಳ್ಳೆಯದಲ್ಲ, ಅದು ಚಿತಾ ಸಮಾನವೆಂದು ನನಗೆ ಯಾರೋ ಹೇಳಿದ್ದರು. ಆದ್ದರಿಂದ, ನಾನು ಚಿರಂಜೀವಿತ್ವದ ಸಾಧನೆಗಾಗಿ, ಚಿಂತೆಯನ್ನು ಮಾಡಿದೆ. ಅದಕ್ಕಾಗಿ ಹಲವು ದ್ರಾವಕಗಳನ್ನು ಆಶ್ರಯಿಸಿದೆ; ಮಸಾಲೆ ದೋಸೆಗಾಗಿ ಒಲೆ ಮುಂದೆ ಗಂಟೆಕಟ್ಟಲೆ ಕೂತೆ.

ದುಡಿಮೆಯೇ ಆರೋಗ್ಯಸಂಪಾದನೆಗೆ ಏಕಮಾರ್ಗವಾದ್ದರಿಂದ, ಎಲ್ಲೆಲ್ಲಿ ಜನ ಗದ್ದೆ ಹೊಲಗಳಲ್ಲಿ, ಕಾರ್ಖಾನೆಗಳಲ್ಲಿ ದುಡಿಯುತ್ತಾರೋ, ಅಲ್ಲೆಲ್ಲಾ ಹೋಗಿ, ಅದನ್ನು ನೋಡುತ್ತ ಆ ವಾತಾವರಣವನ್ನೇ ಶ್ವಾಸಕೋಶಕ್ಕೆ ತುಂಬುತ್ತಾ ಬಂದೆ ನನ್ನ ಇಬ್ಬರು ಗಂಡುಹುಡುಗರನ್ನೂ ದುಡಿಮೆಗೆ ಹಾಕಿದೇನೆ. ನಾನು ಅಚ್ಚುಕಟ್ಟಾಗಿ ಅವರಿಗೆ ಬುದ್ಧಿವಾದ ಹೇಳುತ್ತ, ಕೂತಿದೇನೆ, ಈ ಮಂದಲಿಗೆಮೇಲೆ

ತಿಳಿಯಿತೆ? ಈಗ, ನನ್ನ ದೀರ್ಘಜೀವನದ ಗುಟ್ಟು?

ಸೋಮಯ್ಯ.




"ಶ್ಶ್ .. ಜೋರಾಗಿ ಹೇಳಬೇಡಿ,. .. ಮಳೇ ಬರೋಹಾಗಿದೆ ಅಂತ .. ಅಷ್ಟು ಕೇಳಿದ್ರೇ ಸಾಕು. ನಮ್ಮೂರಲ್ಲಿ ದೀಪ ಹೋಗ್ಬಿಡತ್ತೆ !!...."

# ಕೆಲಸ ಕೇಳ್ಕೋಕೆಹೋದರೆ!

"ಯಾರೋ ಆಚೆ ನಿಂತಿರೋದು, ಕರೆಯೋ ಅವ್ರನ್ನ"

"ದಯಮಾಡಿಸಿ ಒಳಕ್ಕೆ ಬುದ್ಧಿ... ಸಾಹೇಬ್ರು ಕರೀತಾವ್ರೆ"

"ಬನ್ನಿ .. ಬನ್ರಿ ಹತ್ತಿರಕ್ಕೆ"

"ಒಂದೆ ಸಾರ್....ಇಕೋ ನಿಮ್ಮ ಹತ್ತಿರಾನೇ, ನೀವು ಅಪೇಕ್ಷಿಸಿದ ಹಾಗೆ"

"ಲಕ್ಷಣವಾಗಿ ಕೂತುಕೊಳ್ರಿ ನೀವೇನೋ ಆವಾರ ಪತ್ರಿಕೆ ಪ್ರತಿನಿಧಿಗಳು....ಏನು ನನ್ನ ಲೇಖನ ಬೇಕೇನು ಯಾವುದಾದರೂ ವಿಷಯದಮೇಲೆ ಈ ವಾರಾನೇ ಪ್ರಕಟಿಸ್ತೀರೇನು"

"ಸಾರ್ ಏನ್ ಸಾರ್ ಇದು"

"ಯಾಕ್ರಿ ತೊದಲು, ನಾಲಿಗೆ ಸ್ವಾಧೀನವಿಲ್ಲವೇನ್ರಿ. ಪಾಪ ನೀವೇನು ಮಾಡ್ತೀರಿ. ಬೆಳಗ್ಗೆ ಇಂದ ಒಂದು ಲೋಟ ಕಾಫಿ ಕುಡ್ಯೋಕೂ ನಿಮಗೆ ಒಂದೂ ವರಾಣೆ ಇಲ್ಲ ಅಂತ ಕಾಣುತ್ತೆ. ತರಿಸ್ತೀನಿ ಇಲ್ಲೀಗೆ, ಕುಡಿದು ಹೋಗಿ"

"ಕಾಸಿದೆ ಸಾರ್ ...ಬೇಕಾದ್ರೆ ತರ್ಸಿ ...ಕುಡಿಯೋಣ"

"ನೀವು ಬಿಡ್ತೀರೇನ್ರಿ ...ಯಾಕ್ರಿ ಬಿಗುಮಾನ"

"ನನ್ನ ವಿಷಯ ಸಾರ್"

"ಜ್ಞಾಪಕ ಇದೆಕಣ್ರಿ....ನಿಮ್ಮ ಮುಖನೋಡಿದ ತಕ್ಷಣವೇ ಗೊತ್ತಾಯ್ತು. ಬೆನ್ನು ಹತ್ತಿರೋ ನೀವು ಬಿಡ್ತೀರ"

"ಬೆಳಗ್ಗೆ ಬಂದೆಸಾರ್....ಕಾದು ಕಾದು ಸಂಕಟವಾಯ್ತು ಸಾರ್"

"ಅವರವರ ಮನೆ ಬಾಗಿಲು ಕಾಯೋದೋ ಅಲ್ಲವೇನ್ರಿ ನಿಮ್ಮ ಕೆಲಸ, ಅದಕ್ಕೊ ಕೈತುಂಬಾ ಹಣ ಕೊಡುವಾಗ ನಿಮಗೇನ್ರಿ ಧಾಡಿ"

"ಚನ್ನಾಗಿ ಕಾಯ್ತೀನೆ ಸಾರ್. . ನಾಳೇನೂ"

"ನೋಡಿದ್ರ ಆಗ್ಲೆ ...ಕಾಫಿ ಬಿದ್ದಮೇಲೆ ತಲೆ ತಿರುಗ್ಹೋಯ್ತು ...ನಿಮ್ಮ ಕಸುಬೇ ಅಂಥಾದ್ದು, ನೀವೇನು ಮಾಡ್ತೀರ....ಹೊರಟುಹೋಗ್ತೀನಿ ಅಂತೀರಲ್ಲ ... ಅಷ್ಟೊಂದು ಹಾಳೇನ ಈ ವಾರ ಹೇಗ್ರಿ ತುಂಬ್ತೀರ....ಯಾವ ಸಮ್ಮೇಳನ ಇದೇರ್ರಿ"

"ಯಾಕೆ ಸಾರ್ ತಾವು ಇವತ್ತು ಹೀಗೆ"

"ನೋಡಿದ್ರ ನಿಮ್ಮ ಹಾಳುವಾರ ಪತ್ರಿಕೆ ಬುದ್ಧಿ ಎಲ್ಲೀತಂಕ ಹೋಯ್ತು.... ನಾನೇನು ಸರ್ವೇಯರ್ ಬೀದಿ ವೆಂಕಣ್ಣಯ್ಯ ಅಂತ ತಿಳುಕೊಂಡ್ರ... ಅವನಷ್ಟು ನಾನೇನು ಚೀಪಲ್ಲ"

"ವೆಂಕಣ್ಣಯ್ಯನವರೂ ತಮ್ಮ ಹಾಗೇ"

"ತಲೆತಿರುಗುತ್ತೇನ್ರಿ ...ಅಯ್ಯೋ ಪಾಪ ಅಂತ ಕಾಫಿ ಕೊಡಿಸಿದ್ರೆ ನನ್ನನ್ನೇ ಅವಹೇಳನಮಾಡ್ತೀರ... ವೆಂಕಣ್ಣಯ್ಯನ ಸರಿಮಾನಸ್ಥನೇನ್ರಿ ನಾನು. ನಿಮ್ಮ ಹಾಳು ಬಾಯಲ್ಲಿ ಅಪಶ್ರುತಿ"

"ತಪ್ಪಾಯ್ತು ಸಾರ್, ವೆಂಕಣ್ಣಯ್ಯನೆಲ್ಲಿ ತಾವೆಲ್ಲಿ?

"ಅವನ ಹಾಳುಲೇಖನ "ನಿಷ್ಕಾಮ ಕರ್ಮ" ಅಂತ ಆರು ಪುಟಾನ ಅಚ್ಚಾಕಿದೀರಲ್ಲ, ನಿಮಗೆ ಅರ್ಥವಾಯ್ತೇನ್ರಿ ಅದು, ಅದರ ಬದಲು ೬ ಪುಟ ಖಾಲಿ ಕಾಗದ ಬಿಟ್ಟಿದ್ರೆ ನಿಮ್ಮ ಪತ್ರಿಕೇನ ಹುಡುಗ್ರೆಲ್ಲ ಕೊಂಡುಕೊಳಶ್ತಿ ಇದ್ರು"

"ಹಾಗೂ ಮಾಡಬಹುದಾಗಿತ್ತು ಸಾರ್"

"ಇನ್ನುಮುಂದೆ ವೆಂಕಣ್ಣಯ್ಯನ ಲೇಖನ ಬಂದರೆ ಹಾಗೇಮಾಡಿ. ಈಗ ನನ್ನ ಲೇಖನ ಅವಶ್ಯಕವಾಗಿಬೇಕು ಅಂತೀರ"

"ನಾನು ಏನು ಹೇಳಲಿಸಾರ್"

"ಯಾಕ್ರಿ ಸಂಪಾದಕರ ಕಳೆ ನಿಮಗೂನು, ಗೋಳುಗರೆ"

"ಸರ್ವೆ ಸಾಮಾನ್ಯವಾದ್ದು ಸಾರ್"

"ಏನು ಲೇಖನ ಕೊಡುಕ್ಕೆ ಆಗುತ್ರಿ, ನೀವು ಎದೆಮೇಲೆ ಕೂತ್ಕೊಂಡು ಬಿಟ್ರೆ ಈವಾರ ಭವಿಷ್ಯಾನೇ ಇನ್ನೊಂದು ಪುಟ ಹೆಚ್ಚಾಗಿ ಬರಸಿಹಾಕರಿ"

"ಯಾಕೆ ಸಂಪಾದಕರು ಬೈತಾರೇನು, ಬರೀ ಕೈಬೀಸ್ಕೊಂಡು ಬಂದ ಅಂತ ...ಬೇಕಾದ್ರೆ ತೊಗೊಂಡು ಹೋಗಿ ನಿಮ್ಮ ಪತ್ರಿಕೆ ಹಳೇಸಂಚಿಕೆಗಳು ಇಲ್ಲಿ ಬಿದ್ದಿವೆ. ಅದರಿಂದಲೇ ಪುಟ ತೆಗೆದು ಮತ್ತೆ ಅಚ್ಚಿನಲ್ಲಿ ಚಚ್ಚಿ ಯಾರು ಓದಿದಾರ್ರಿ ಗೊತ್ತಾಗೋಕೆ"

"ನಗು ಬರುತ್ತೆ ಸಾರ್"

"ಹಾಗಾದ್ರೆ ಇನ್ನೂ ಅನುಕೂಲ; ಅದನ್ನ ತಿರಿಗೆ ಕಂಪೋಸ್ ಮಾಡಿಸ್ಬೇಡಿ ಹಳೇ ಸಂಚಿಕೆಗಳಿಂದಲೇ (ಬೇಕಾದಷ್ಟು ಬಿದ್ದಿದೆಯಲ್ಲ!) ಎರಡೆರಡು ಹಾಳೆ ತೆಗೆದು ಮಧ್ಯೆ ಮಧ್ಯೆ ಸೇರಿಸಿಕೊಡಿ, ಸ್ವಾರಸ್ಯವಾಗಿರುತ್ತೆ."

"ಹಾಗೂ ಮಾಡಬಹುದು ಸಾರ್"

"ಮತ್ತೇನು ನಿಮ್ಮ ಸಂಕಟ"

"ಏನೂ ಇಲ್ಲ ಸಾರ್....ಹೋಗಿಬರುತ್ತೇನೆ"

*　　　　*　　　　*

"ಲೋ, ಕರೆಯೋ ಅವರನ್ನ....ಬೇಗ ಕೂಗೋ, ಓಡ್ತಿದಾರೆ"

"ಸಾರ್, ಸಾಹೇಬ್ರು ಕರೀತಾರೆ ...ಬರಬೇಕಂತೆ"

"ಒಳಕ್ಕೆ ಬನ್ರಿ ...ಗಾಬರಿ ಪಡಬೇಡಿ, ನೀವೇ ಅಲ್ಲವೆ ಗೋವಿಂದಯ್ಯ"

"ಹೌದು ಸಾರ್... ಕೆಲಸಕ್ಕೆ ಅರ್ಜಿ ಹಾಕಿಕೊಂಡಿದ್ದೆ ಸಾರ್. ಅದಕ್ಕೆ ಬಂದಿದ್ದೆ"

"ಬಂದಿದ್ದೆ! .. ಯಾವಾಗ ಬಂದಿದ್ದರಿ"

"ಇಷ್ಟು ಹೊತ್ತು ನಿಮ್ಮ ಮುಂದೇನೇ ಕೂತಿದ್ದನಲ್ಲ ಸಾರ್"

"ಹೌದು....ಒಂಬತ್ತುವರೇಗೆ ಆ ವಾರ ಪತ್ರಿಕೆ ಪ್ರತಿನಿಧಿ ಬರ್ತೀನಿ ಅಂತ ಹೇಳಿದ್ದ"

"ಅವನೇ ನಾನು ಅಂತ ತಿಳಿದುಕೊಂಡು...."

"ಇಲ್ಲ, ಇಲ್ಲ, ನೀವು ಅಂತಲೇ ಗೊತ್ತಿತ್ತು. ಆದರೂ ನೀವು ಅವರು ಅಂತಲೇ ಊಹಿಸಿಕೊಂಡು ಆಡಬೇಕಾದ್ದನ್ನು ಆಡಿದೆ."

"ಈಗ ನಾನು ಸಾರ್....ಗೋವಿಂದಯ್ಯ"

"ಹೌದು ...ಗಂಟೆ ಎಷ್ಟು ನೋಡಿ.....ಹತ್ತೂವರೇಗೆ ನಿಮ್ಮನ್ನು ಬರೋಕೆ ಹೇಳಿದ್ದಿದ್ದು ಅಲ್ಲವೆ?"

"ಈಗ ಸರಿಯಾಗಿ ಹತ್ತೂವರೆ ಸಾರ್"

"ಸರಿ ಏನು ನಿಮ್ಮ ವಿಷಯ"

"ಕೆಲಸಕ್ಕೆ ಅರ್ಜಿ ಹಾಕಿಕೊಂಡು ಒಂದು ತಿಂಗಳಾಯ್ತು ಸಾರ್"

"ಅದಕ್ಕೇನು ಮಾಡಬೇಕು ಅಂತ"

"ಕೆಲಸ ಕೊಡಬೇಕು ಸಾರ್"

"ಏನು ಪಾಸ್ ಮಾಡಿದೀರ"

"ಬಿ. ಎ. ಸಾರ್"

"ಹಾಗಾದ್ರೆ ಕೆಲ್ಸ ಇಲ್ಲ ಹೋಗಿ"

"ಬಿ ಎ. ಪಾಸ್ ಮಾಡಿಲ್ಲ ಅಂತ ತಿಳುಕೊಂಡು ಕೆಲಸ ಕೊಡಿಸಾರ್"

“ಮದುವೆ ಆಗಿದ್ಯೇನ್ರಿ ಹೋಗ್ಲಿ”

“ಇಲ್ಲ ಸಾರ್”

“ಅಯ್ಯೋ; ಎಂ. ಎ.ಗೆ ಸೇರ್ಕೊಳ್ಳಿ ಹೋಗಿ”

“ಸಾರ್....ಬಹಳ ಕಷ್ಟ....ಕೆಲಸ ಕೊಡಿಸಿ ಸಾರ್”

“ಘಂಟೆ ಎಷ್ಟು ನೋಡಿ ಈವಾಗ”

“ಹತ್ತು ನಲವತ್ತೈದು ಸಾರ್”

“ಸರಿಯಾಗಿ ನೋಡಿ ಹೇಳಿ”

“ಕರಾರು ವಾಕ್ ಆಗಿದೆ ಸಾರ್”

“ಹಾಗಾದ್ರೆ ಕೂಡಿ, ಹತ್ತೂಮುಕ್ಕಾಲಿಗೆ ನನ್ನ ಷಡ್ಡಕನ್ನ ಬರೋದಕ್ಕೆ ಹೇಳಿದ್ದೆ ಘಂಟೆ ಆಯ್ತು”

“ಆಗ್ಲೆ ಹತ್ತು ಐವತ್ತು ಸಾರ್”

“ಸರಿ. ಏನು ಒಬ್ಬರೇ ಬಂದುಬಿಟ್ರಿ, ಲಲಿತನ್ನ ಮಕ್ಕಳನ್ನ ಕರ್ಕೊಂಡು ಬರ್ತೀರ ಅಂತ ತಿಳ್ಕೊಂಡಿದ್ದೆ, ಏಕೆ ಹೀಗೆ ಮಾಡಿಬಿಟ್ರಲ್ಲ?”

“ನಾನೇ ಸಾರ್....ಗೋವಿಂದಯ್ಯ”

“ಲಲಿತೂದು ಈ ಸಲದ್ದು ಗಂಡೋ, ಹೆಣ್ಣೋ ಹೇಳಲೇ ಇಲ್ಲವಲ್ಲ” ಹೇಳೋಕೆ ಗೋವಿಂದಯ್ಯ ಅಲ್ಲಿ ನಿಲ್ಲಲಿಲ್ಲ. ಅವನಿಗೆ ನಡುಕ ಹತ್ತಿ ಪರಾರಿಯಾಗಿದ್ದ.

—ಹಾ ರಾ.




ಈಚಲಮರದ ಕೆಳಗೆ ಮಜ್ಜಿಗೆ ಕುಡೀಬಾರದು

# ಕಲೆಗಾರ ಕುನ್ನಿ

ಸ್ವಾಮಿ,

ಕನ್ನಡ ಸಾಹಿತ್ಯ ಸರಸ್ವತಿಗೆ ನನ್ನ ಪಾಲಿನ ಸೇವೆ ಸಲ್ಲಿಸಲು ನಾನು, ಮೊನ್ನೆ ಜರುಗಿದ ಬಿ. ಎಸ್‌ಸಿ. ಪರೀಕ್ಷೆಯಲ್ಲಿ ಸೋತು ಕೂತಿದೇನೆ. ಯಾವ ಬಗೆಯ ಕಾದಂಬರಿ ಬೇಕಾದರೂ ಬರೆದು ಕಳುಹಿಸಲು ಸಿದ್ಧವಿದೇನೆ. ಕೂಡಲೇ ಉತ್ತರ ಬರೆಯಿರಿ.

"ಕುನ್ನಿ"

೧-೩-೫೪

ಶ್ರೀ 'ಕುನ್ನಿ' ಅವರಿಗೆ

ಈಗ ನಮಗೆ ಬೇಕಾಗಿರುವುದು ಸಾಮಾಜಿಕ ಕಾದಂಬರಿಗಳು; ಸಿನಿಮಗಳಲ್ಲಿ ಬಂದರೆ, ಸೆನ್ಸಾರ್ ಬೋರ್ಡಿನವರು ಕತ್ತರಿಸುವಂತಹ ಸನ್ನಿವೇಶಗಳನ್ನು, ಹತ್ತು ಪುಟಕ್ಕೊಂದರಂತೆ, ತುಂಬಿರುವ ಕಾಗಂಬರಿಗಳು. ಬಾಲವಿಧವೆಯರು, ವೇಶ್ಯೆಯರು, ಸಾಹುಕಾರರುಗಳ ಏಕಪುತ್ರರು, ನಾಟಕದ ಕಂಪನಿ ಆಕ್ಟರುಗಳು, ಇತ್ಯಾದಿ ನಾಯಕನಾಯಕಿಯರು ..

ನಿಮ್ಮವ,

೧೫-೩-೫೪

ಸ್ವಾಮಿ,

ಇಂದೇ ನಿಮಗೆ ನನ್ನ ೩೦೦ ಪುಟದ ಸಾಮಾಜಿಕ ಕಾದಂಬರಿಯನ್ನು ಪಾರ್ಸಲ್ ಮಾಡಿದೇನೆ. ಕಥಾನಾಯಕಿ, ನೀವು ಹೇಳಿದಂತೆ, ಬಾಲವಿಧವೆ; ನಾಯಕ ನಮ್ಮೂರಿನ ಸಾಹುಕಾರನ ಮಗ....೮ ಪುಟಕ್ಕೊಂದರಂತೆ ನೀವು ಸೂಚಿಸಿದ ಸನ್ನಿವೇಶಗಳನ್ನು ತುಂಬಿದೇನೆ. ೬ ನೆಯ ಅಧ್ಯಾಯದಲ್ಲಿ ನಾನು ವಿವರಿಸಿರುವ ಘಟನೆ ನಿಮ್ಮ ಮೆಚ್ಚುಗೆಗೆ ಅರ್ಹವಾಗಿದೆಯಲ್ಲವೆ?

ಕುನ್ನಿ

೧೫-೫-೫೪

ಶ್ರೀ 'ಕುನ್ನಿ' ಅವರಿಗೆ,

ನಿಮ್ಮ ಕಾದಂಬರಿಯನ್ನೋದಿದೆ. ಈಚಿಗೆ, ಇದೇ ತೆರನ ಕಾದಂಬರಿಗಳು ನೂರಾರು ಪ್ರಕಟವಾಗಿ, ಜನರ ಮನಕ್ಕೆ ಬಹಳ ಅಸಹ್ಯವೆನಿಸಿಬಿಟ್ಟಿದೆ. ವಾಚಕ

ವೃಂದವೂ ವಿದ್ಯೆಯಲ್ಲೂ ಸಂಸ್ಕೃತಿಯಲ್ಲೂ ಮುಂದುವರಿದಿದ್ದಾರೆ. ನೀತಿಯುತವಾದ ಕಾದಂಬರಿಗಳನ್ನೇ ಕೇಳುತ್ತಿದ್ದಾರೆ. ಬಾಲವಿಧವೆ, ನೀವೇ ಎಂದು ಭಾವಿಸಿಕೊಂಡು, ಇಡೀ ಕಾದಂಬರಿಯನ್ನು "ನನ್ನ ಹಾಳು ಜೀವನ" ಎಂದು ಬದಲಾಯಿಸಿ "ನನ್ನಿಂದ ಜಗತ್ತು ಪಾಠ ಕಲಿಯಲಿ" ಎಂದು ಕೊನೆಗಾಣಿಸಿದರೆ, ಟೆಕ್ಸ್ಟ್ ಆದರೂ ಆಗ ಬಹುದು. ಕೂಡಲೇ ಕೈಹಚ್ಚಿರಿ.

ನಿಮ್ಮವ

೧೦-೬ ೫೪

**ಸ್ವಾಮಿ,**

ಇಕೊ! ತಮ್ಮಮಾತಿನಂತೆ ತಿದ್ದಿ ಕಳುಹಿಸಿದೇನೆ. ಎಂಟೆಂಟು ಪುಟಕೊಮ್ಮೆ ಬರುತ್ತಿದ್ದ ಆ ಹೊಲಸನ್ನೆಲ್ಲ **"ನನ್ನ ಹೊಲಸು ಕನಸು-೧" "ನನ್ನ ಹೊಲಸು ಕನಸು-೨"** ಎಂದು ಮೊಗುಂ ಆಗಿ ಸಣ್ಣ ಅಕ್ಷರದಲ್ಲಿ ತೇಲಿಸಿದೇನೆ

ಅಲ್ಲದೆ, ಬಾಲವಿಧವೆಯ ವಯಸ್ಸನ್ನು ೩೧ ಕ್ಕೆ ಏರಿಸಿದೇನೆ. ಕೂಡಲೇ, ಅಚ್ಚುಮಾಡಿ. ಈಗ ಇದನ್ನು ನೋಡಿ ಯಾರೂ ಅಸಹ್ಯಪಡುವಂತಿಲ್ಲವೆಂಬುದು ನನ್ನ ಅಭಿಪ್ರಾಯ....

ಕುನ್ನಿ

೨೮-೯-೫೪

**ಶ್ರೀ 'ಕುನ್ನಿ' ಅವರಿಗೆ**

ನಿಮ್ಮ ೩೦೦ ಪುಟಗಳ ಪುಸ್ತಕ ಟೆಕ್ಸ್ಟ್‌ಗೆ ತೀರ ಹೆಚ್ಚು ಎಂದು ನಮಗೆ ತೋರುತ್ತೆ. ವಾರಕ್ಕೆರಡು ಪೀರಿಯಡ್ಡುಗಳ ಪಾಠ, ವರ್ಷಕ್ಕೆ ೨೦ ವಾರ, ಅಂದರೆ, ೪೦ ಪೀರಿಯಡ್ಡಿನಲ್ಲಿ ಅಡ್ಡಿ ಆಂತಕಗಳಿಂದ ಪಾಠನಡೆಯದೆ ಇರುವ ೨೦ ನ್ನು ತೆಗೆದರೆ ೨೦ ಪೀರಿಯಡ್ಡು; ಒಂದಕ್ಕೆ ೫ ಪುಟದಂತೆ, ೧೦೦ ಪುಟ. ಅಷ್ಟಕ್ಕೆ ನಿಮ್ಮ ಗ್ರಂಥ ವನ್ನಿಳಿಸುವ ಸಲುವಾಗಿ, "ಕನಸು"ಗಳನೆಲ್ಲ ತೆಗೆದು ಹಾಕಿದೇವೆ. ಕೊನೆಯ ೧೨೨ ಪುಟಗಳಿಗೆ ಬದಲಾಗಿ, ಗಾಂಧಿಯವರ ಜೀವನವನ್ನು ೩ ಪುಟದಷ್ಟು ಕೊಟ್ಟದೇವೆ. "ನನ್ನ ಹಾಳು ಜೀವನ" ಎಂಬ ಹೆಸರಿಗೆ ಬದಲಾಗಿ, "ನನ್ನವನ" ಎಂದು ನಾಮಕರಣ ಮಾಡಿದೇವೆ. ಕೂಡಲೇ, ಯಾರಾದರೂ ಪ್ರತಿಷ್ಠಾವಂತರಿಂದ ನಿಮ್ಮ ಕಾದಂಬರಿಗೆ ಮುನ್ನುಡಿ ಬರೆಸಲು ಏರ್ಪಾಟುಮಾಡಿ.

ನಿಮಗೆ ಯಾವ ಪ್ರತಿಷ್ಠಾವಂತ ದೊರೆಯುತ್ತಾನೆ, ಎಂಬುದನ್ನು ತಿಳಿದಮೇಲೆ, ಇದನ್ನು ಅಚ್ಚುಮಾಡುವ ನಿರ್ಧಾರಕ್ಕೆ ಬರುತ್ತೇವೆ; ನಿಮಗೆ ಪತ್ರಬರೆಯುತ್ತೇವೆ.

ನಿಮ್ಮವ....

೩೦-೧೦-೫೪

---

# ಕ್ಯಾ|| ಇಜಾರಪ್ಪ ಮತ್ತು ಸಂಗಡಿಗರ ಪರ್ವತಾರೋಹಣ ಪ್ರಸಂಗ

ಅವತ್ತು ಸಂಜೆ ಕೊಂಡಯ್ಯನಹಳ್ಳಿ ಕ್ರಿಕೆಟ್ ಟೀಮಿನ ಸದಸ್ಯರೊಳಗೆ ಚರ್ಚೆಯೇ ಚರ್ಚೆ. ತೇನ್‌ಸಿಂಗ ಎವರೆಸ್ಟ್ ತುದೀಲಿ ಬಾವ್ಟ ನೆಟ್ಟು ಒಂದು ವರ್ಷವಾಯಿತಲ್ಲ; ಆ ಮಹತ್ವದ ದಿನವನ್ನು ಯಾವ ರೀತಿಯಲ್ಲಿ ಆಚರಿಸ ಬೇಕೆಂಬುದೇ ಚರ್ಚೆಯ ವಿಷಯ. ತಲಾ ಆರಾರುಕಾಸು ಚಂದಾ ಕೂಡಿಸಿ ಕಡಲೆ ಗುಗ್ಗರಿ ಕೊಂಡುಕೊಂಡು ತೇನ್‌ಸಿಂಗನ ಚಿತ್ರಕ್ಕೆ ಚರುಪು ಅರ್ಪಿಸಿ ಆ ದಿನವನ್ನ ಆಚರಿಸೋಣ ಎಂಬುದರಿಂದ ತೊಡಗಿ, ತೇನ್‌ಸಿಂಗನನ್ನ ಅಭಿನಂದಿಸಿ ಕಾಗದ ಬರೆದು ಎಲ್ಲರೂ ಸಹಿ ಹಾಕಿ ಪೋಸ್ಟ್ ಮಾಡೋಣ ಎಂಬುದರ ತನಕದ ನಾನಾ ಸಲಹೆಗಳು ಬಂದು, ಅಸ್ವೀಕೃತವಾದುವು. ಎಲ್ಲರಿಗೂ ಸರಿಯೆನಿಸುವಂಥ ಕಾರ್ಯಕ್ರಮವನ್ನು ಸೂಚಿಸುವ ಭಾಗ್ಯ ಶಿವಲಿಂಗುವಿಗೆ ಮಾತ್ರವಿತ್ತು. ಆತ ಹೇಳಿದ್ದು ಇಷ್ಟೆ: "ತೇನ್ ಸಿಂಗ ದೊಡ್ಮನಷ ಆದದ್ದು ಹೇಗರೋ? ಹಿಮಾಲ್ಯಾನ ಹತ್ತಿಬಿಟ್ಟು ತಾನೇ? ಗೌರಿ ಶಂಕ್ರದ ತುದೀ ತನಕ ತೆವಳಿದ್ರಿಂದ ತಾನೆ? ಆದ್ರಿಂದ ಆತನ್ನ ಗೌರವಿಸೋ ಕ್ರಮಾಂದ್ರೆ ಒಂದೇನೆ. ನಂ ಪಾಲಿಗೆ, ನಂ ಕೊಂಡಯ್ಯನ ಬೆಟ್ಟಾನೆ ಹಿಮಾಲ್ಯ. ಅದರ ತುದೀ ತನಕ ಏರಿಬಿಟ್ಟು ಬರೋದೆ ಸರಿಯಾದ ಕೆಲಸ."

ಶಿವಲಿಂಗು ಬಾಯಿಯಿಂದ ಇಷ್ಟು ಬಿದ್ದಿದ್ದೇತಡ— ಸದಸ್ಯರೆಲ್ಲ ಅದೇ ಸರಿ ಎಂದುಬಿಟ್ಟು "ಶಿವ್ಲಿಂಗೂ ಕಿ ಜೈ" "ಶಿವ್ಲಿಂಗೂ ಜಿಂದಾಬಾದ್" ಎಂದು ಜೈಕಾರ ಮಾಡಿದರು. ಕೊಂಡಯ್ಯನಬೆಟ್ಟ ಹತ್ತೋದೆಂದರೆ ಯಾರಿಗೆ ಬೇಡ? ಸೂರ್ಯ ಮುಳ್ಳಿನ ಹಣ್ಣಿನಿಂದ ತೊಡಗಿ ಸೀಬೆಕಾಯಿ ಸೀ ಹುಣಸೆ ತನಕ, ಸಾವಿರ ಜಾತಿ ಹಣ್ಣುಗಳು ಬೆಟ್ಟದ ಮೇಲೆ ಕೇಳೋರೇ ಇಲ್ದೆ ಸೊರಗಿ ಬೀಳ್ತಾ ಇವೆ — ಎಂದು ಎಲ್ಲರಿಗೂ ಗೊತ್ತು. ಆದ್ದರಿಂದಲೇ ಶಿವಲಿಂಗು ಸೂಚಿಸಿದ ಕಾರ್ಯಕ್ರಮದಿಂದ ಎಲ್ಲರಿಗೂ ಖುಷಿ! ಆದರೆ ಕ್ಯಾಪ್ಟನ್ ಹಜಾರೆ ಉರುಫ್ ಇಜಾರಪ್ಪ ಹೇಳಿದ ಮಾತು ಕೇಳಿ ಸದಸ್ಯರಲ್ಲಿ ಹಲವರ ಮುಖ ಕಂದಿತು. ಇಜಾರಪ್ಪ ಶಿವಲಿಂಗು ಸೂಚನೆಯನ್ನ ಅಂಗೀಕರಿಸಿದ. ಆದರೆ ಇಡೀ ಕೆ. ಸಿ. ಟಿ.ಯ (ಕೊಂಡಯ್ಯನಹಳ್ಳಿ ಕ್ರಿಕೆಟ್ ಟೀಮು) ಕಪಿಪಾಳಯ ಕೊಂಡಯ್ಯನಬೆಟ್ಟ ಏರುವ ಕಾರ್ಯಕ್ರಮ ಸಾಧ್ಯವಿಲ್ಲ; ಮೈ ಕೈ ಗಟ್ಟಿ ಮುಟ್ಟಾಗಿರುವ ನಾಲ್ಕು ಮಂದಿ ಮಾತ್ರ ಹತ್ತಿ ಬಂದರೆ ಸಾಕು ಕ್ಯಾ|| ಕೆ ಇಜಾರಪ್ಪ,

ಕೆ. ಸಿ. ವಾಸುದೇವಮೂರ್ತಿ ಉರುಫ್ ವಾಸು, ಕೆ. ಎಸ್. ವೆಂಕಟಾಚಲಂ ಉರುಫ್ ವೆಂಕು, ಬಂಡಿ ಭೀಮಸೇನರಾವ್ ಉರುಫ್ ಭೀಮು — ಹೀಗೆ ನಾಲ್ಕು ಮಂದಿ ಮತ್ತು ಕಡ್ಡಿ ಪೈಲ್ವಾನ್ ಆದರೂ ಸೂಕ್ತ ಸೂಚನೆಯನ್ನು ಕೊಟ್ಟಿದ್ದಕ್ಕಾಗಿ ಕೊಂಡಯ್ಯನಹಳ್ಳಿ ಶಿವಲಿಂಗಮೂರ್ತಿ ಉರುಫ್ ಶಿವ್ಲಿಂಗು – ಒಟ್ಟು ಐವರು ಮಾತ್ರ ಬೆಟ್ಟ ಏರುವುದೆಂದು ಕಾ|| ಇಜಾರಪ್ಪನ ಸುಗ್ರೀವಾಜ್ಞೆಯಾಯಿತು. ಉಳಿದವರಲ್ಲಿ ಹೆಚ್ಚಿನವರು ಬರಿಯ ಪುಟಾಣಿಗಳು, ಸ್ಕೂಲಿಗೆ ಹೊರಟುಬರುವಾಗ ಇನ್ನೂ ಕೂಡ "ಅಮ್ಮಾ ಇಸ್ಕೋಲ್‌ಗೋಗ್ತೀನಮ್ಮಾ ಽಽಽ" ಎಂದು ರಾಗ ಎಳೆಯುವ ಹಸುಳೆಗಳು'— ಅಂಥವರೇನಾದರೂ ದಿನವೆಲ್ಲ ಸ್ಕೂಲ್ ತಪ್ಪಿಸಿಕ್ಕೊಂಡು ಸಾಯಂಕಾಲ ಸೋತು ಸುಣ್ಣವಾಗಿ ಮನೆಗೆ ಕಾಲಿಟ್ಟರೆ ದೇವರೇ ಗತಿ! ಆದ್ದರಿಂದ ಅಂಥವರೆಲ್ಲ ಲಕ್ಷಣವಾಗಿ ಸ್ಕೂಲಿಗೆ ಹೋಗಿ ಬಂದು ಆಂಜನೇಯನಗುಡಿ ಪಕ್ಕದಲ್ಲಿ ಕಾದು ನಿಂತಿರಬೇಕು. ಪರ್ವತಾರೋಹಿಗಳು ಹಿಂದಿರುಗಿ, ನೇರ ಅಲ್ಲಿಗೆ ಬಂದು ತಮ್ಮ ಸಾಹಸದ ವಿವರಗಳನ್ನು ಕೊಡುತ್ತಾರೆ. ಮಾತ್ರವಲ್ಲದೆ ಅಲ್ಲಿಂದ ಕಿತ್ತು ತಂದ ಹಣ್ಣುಗಳನ್ನು ಹಂಚುವ ಸಮಾರಂಭವೂ ನಡೆಯುತ್ತದೆ. ಆದ್ದರಿಂದ ಯಾರೂ ವಿವಂಚನೆಗೊಳಗಾಗಬೇಕಿಲ್ಲ, ಹಾಗಲ್ಲದೆ ಎಲ್ಲರೂ ಬೆಟ್ಟ ಏರಿದ್ದು ತಿಳಿದರೆ ಮಿಡಲ್‌ಸ್ಕೂಲ್‌ಹೆಡ್‌ಮೇಸ್ಟ್ರು ಸುಮ್ನೇ ಇರುತ್ತಾರೆಯೆ? ಎಂದಲ್ಲ ಕ್ಯಾ|| ಇಜಾರಪ್ಪನ ಸಾಮ ನಡೆಯಿತು. ಇಷ್ಟಾದರೂನೂ ಪ್ರತಿಭಟಿಸಿ ನಿಂತ ವಾಮನಮೂರ್ತಿ ಉರುಫ್ ಪಿಗ್ಮಿ ಪ್ರಿನ್ಸ್‌ನ್ನು ಕ್ಯಾಪ್ಟನ್, ದಂಡೋಪಾಯದಿಂದ ಸುಮ್ಮನಿರಿಸಬೇಕಾಯಿತು ನಿನ್ನಿಂದ ಬೆಟ್ಟ ಹತ್ತೋಕೆ ಸಾಧ್ಯವಲ್ಲಕಣೋ, ಇಪ್ಪತ್ನಾಲ್ಕಂಗುಲ ಇದೀಯಲ್ಲೋ, ಗಾಳಿ ಬೀಸಿದರೆ ತೂರಿ ಹೋಗುವ ಹಾಗಿದೀಯಲ್ಲೋ, ತಿಂಗಳಿಗೆ ನಾಲ್ಕುದಿನ ಜ್ವರ ಅಂತ ಮಲಗತಿಯಲ್ಲೋ; ಎಂದರೆ ಆತ ಕೇಳಬೇಕೆ? ಮರಕೋತಿ ಆಡುವಾಗ ಅವತ್ತು ಮಾವಿನಮರದಿಂದ ಬಿದ್ದೆನಲ್ಲ; ಒಂದಾದರೂ ಮೂಳೆ ಮುರಿಯಿತೆ? ಆದ್ದರಿಂದ ತಾನು ಸಾಮರ್ಥ್ಯವಂತ, ತೇನ್‌ಶಿಂಗನಿಗಿಂತ ಕಡಿಮೆಯಲ್ಲ. ಹಾಗೆ ನೋಡಿದರೆ ತೇನ್‌ಶಿಂಗನೇನು ಕಿಂಗ್ ಕಾಂಗಿನ ಹಾಗೆ ಬೆಳೆದಿದಾನೆಯೆ? ಎಂದು ಅವನ ವಾದ. ಕೊನೆಗೂ ಅವನನ್ನು ಪಾದಪೂಜೆಮಾಡಿ ಓಡಿಸಬೇಕಾಯಿತು. ಆತ ಕ್ಷೇಮವೆನ್ನುವಷ್ಟು ದೂರ ಓಡಿಹೋಗಿ "ನೋಡ್ತಿರಿ, ಎಡ್ಮೇಸ್ಟ್ರಿಗೆ ಏಳ್ತೀನಿ.... ನಿಮ್ಮಪ್ಪ ಸಿದ್ದಪ್ಪನಿಗೆ ಏಳ್ತೀನಿ" ಎಂದು ಪ್ರತೀಕಾರದ ಹೊಗೆಯಾಡಿಸಿದಾಗ ಉಳಿದ ಸದಸ್ಯರೆಲ್ಲ ಸೇರಿ, ಹಾಗೆ ಮಾಡಿದ್ದಾದರೆ ಆತನನ್ನು ಕೆರೆಯ ಏರಿಯಲ್ಲಿ ಜೀವಂತ ಹೂಳುವುದಾಗಿ ಭರವಸೆಯಿತ್ತರು.

ಅನಂತರ ಆರೋಹಿಗಳು ಬೆಟ್ಟಕ್ಕೆ ಒಯ್ಯತಕ್ಕ ವಸ್ತುಗಳ ಕುರಿತು ವಿಚಾರ ವಿನಿಮಯ ನಡೆಯಿತು. ವಸ್ತುಗಳೆಂದರೆ, ಮುಖ್ಯವಾಗಿ ತುತ್ತಿನ ಚೀಲಕ್ಕೆ ಬೇಕಾದ ಅಂಶಗಳು. ನಾಲ್ಕು ಚಿಪ್ಪು ಬಾಳೆಹಣ್ಣಿಗೆ ತಾನಿದೀನಿ ಎಂಬುದಾಗಿ ಕ್ಯಾ|| ಇಜಾರಪ್ಪ ಖುದ್ದು ಒಪ್ಪಿಕೊಂಡ. ಏಕೆಂದರೆ ರಸಬಾಳೆ ಗೊನೆಯೊಂದನ್ನ ಅವರಪ್ಪ ಕಡಿದು

ತೂಗಹಾಕಿ ಆಗಲೇ ನಾಲ್ಕಾರು ದಿನಗಳಾಗಿದ್ದುವು ಮಾರನೆಯದಿನ ಅದರ ವಿಸಿಯೋಗವಾಗಬೇಕಿತ್ತು. ಇಡ್ಲಿ, ತಮ್ಮ ಮನೆಯಿಂದ ತಾನು ತರುವುದಾಗಿ ಭೀಮು ಹೇಳಿದ. "ಭಾವ ಬಂದಿದಾರೆ. ನಾಳೆ ನಮ್ಮನೇಲಿ ಏನ್ಮಾಡ್ತಾರೋ ಗೊತ್ತಿಲ್ಲ ಅದೇನಿದ್ದರೂ ನಾನು ಗಿಟ್ಟಿಸಿಕೊಂತೀನಿ. ಸಾಧ್ಯವಾದರೆ ಥರ್ಮಾಸ್ ಫ್ಲಾಸ್ಕ್ ಎತ್ಕೊಂಡು ಕಾಫೀನೂ ತರ್ತೀನಿ" — ಎಂದ ವಾಸು. ವೆಂಕು ಮತ್ತು ಶಿವ್ಲಿಂಗು ಎಂಟೆಂಟಾಣೆ ನಗದು ತರುವುದಕ್ಕೊಪ್ಪಿದರು. ಶೇಶಪ್ಪನ ಹೋಟೆಲಲ್ಲಿ ಎಂಟು ಮಸಾಲೆ ಕಟ್ಟಿಸಿಕೊಳ್ಳದೆ ವಿಧಿಯಿಲ್ಲವಲ್ಲ! ಇವಿಷ್ಟು ಆಹಾರ ಸಾಮಗ್ರಿಗಳ ವಿಚಾರವಾಯಿತು

ಉಳಿದ ಬಾಬ್ತುಗಳು ಯಾವು ಯಾವುವು ಎಂದು ಚರ್ಚೆ ನಡೆಯಿತು ಬೆಟ್ಟದ ಮೇಲೆ ಕೆರೆಯಿದೆ. ಎಳನೀರಿನಂಥ ನೀರು. ಅಂದಮೇಲೆ ಈಜದೆ ಬರುವುದು ಸರಿಯಲ್ಲ. ಆದ್ದರಿಂದ ಟವಲುಗಳನ್ನಂತೂ ತರಬೇಕು. ಹಣ್ಣುಗಳನ್ನ ಕೀಳೋದಕ್ಕೆ ದೊಡ್ಡ ಕೋಲೊಂದು ಬೇಕಾಗಬಹುದು. ಅದನ್ನು ಗೂಳಿಗರ ಮಕ್ಕಳಿಂದ ಪಡೆಯ ಬಹುದು, ಹೇಗೂ ದನ ಮೇಯಿಸುತ್ತ ಇರುತ್ತಾರಲ್ಲ ಬೆಟ್ಟದ ತಪ್ಪಲಲ್ಲಿ. ಹಾಗೆ ಬೇಕಾದರೆ ಅವರಲ್ಲೊಬ್ಬರನ್ನು ಜೊತೆಗೆ ಕರೆದೊಯ್ದರಾಯಿತು — ಪರಂಗಿಯವರು 'ಹಿಮಾಲ್ಯ' ಹತ್ತೋವಾಗ ಷೆರ್ಪಾಗಳನ್ನ ಒಯ್ಯುವುದಿಲ್ಲವೇ ಹಾಗೆ! ಒಂದು ಪಿಳ್ಳಂಗೋವಿ ಇನ್ನೊಂದು ಮೌತ್ ಆರ್ಗನ್ ಇವುಗಳಂತೂ ಇರಲೇಬೇಕು. ಕವಣೆ ಕೋಲಂತೂ ಇಜಾರಪ್ಪನ ಕಿಸೆಯಲ್ಲೇ ಇರುತ್ತದೆ ಆದ್ದರಿಂದ ಅದನ್ನ ಒಯ್ಯ ಬೇಕೆಂದು ಪ್ರತ್ಯೇಕ ಹೇಳಿಕೊಳ್ಳಬೇಕಾಗಿಲ್ಲ. ಎವರೆಸ್ಟ್ ಏರಿದವರ ಕೈಯಲ್ಲಿ ಕೋವಿ ಪಿಸ್ತೂಲು ಇದ್ದಮೇಲೆ ಇವರಿಗೆ ಕವಣೆಯಾದರೂ ಬೇಡವೆ? ಹಿಮಾಲಯದಲ್ಲಿ ಅಬಾಮಿನಲ್ ಸ್ನೋಮ್ಯಾನ್‌ಗಳು ಇದ್ದಾವಂತೆ. ಕೊಂಡಯ್ಯನ ಬೆಟ್ಟದಲ್ಲಿ ಆ ಭಯ ವಿಲ್ಲ! ಅಥವಾ ಬಿಸಿಲು ಭೂತಗಳೂ ಇರಲಾರವು. ಆದರೂ ನಾಲ್ಕು ಕಪಿಗಳಾದರೂ ಇವೆಯಲ್ಲ ಕಲ್ಲು ಬೀರುಕ್ಕೆ! ಅಂದಮೇಲೆ ಕವಣೆಗೂ ಪ್ರಾಮುಖ್ಯ ಸ್ಥಾನವಿದೆ. ಇಷ್ಟೆಲ್ಲ ವ್ಯವಸ್ಥೆಯಾಯಿತು ಇನ್ನು ಎವರೆಸ್ಟ್ ಏರಿದವರು ಕೊಂಡುಹೋದಹಾಗೆ ವೈದ್ಯಕೀಯ ಸಾಮಗ್ರಿಗಳೂ ಬೇಕಾಗಬಹುದೋ ಎಂಬ ಶಂಕೆ ಉಂಟಾಯಿತು. ಆಗ, ಯಾವ ಬೇನೆಗಾದರೂ ಬೆಟ್ಟದ ಮೇಲಿನ ಸೊಪ್ಪು ಸದೆಗಳಿಂದಲೇ ನಾನು ಚಿಕಿತ್ಸೆ ಮಾಡಬಲ್ಲನೆಂಬುದಾಗಿ ವೆಂಕು ಧೈರ್ಯ ಹೇಳಿದ. ಆಕ್ಸಿಜನ್ ಇತ್ಯಾದಿ ಗಳಿಗಾಗಿ ತಾವು ಪರದಾಡುವ ಅಗತ್ಯವಿಲ್ಲದುದಕ್ಕಾಗಿ ನಮ್ಮ ಆರೋಹಿಗಳು ಸಂತೋಷಪಟ್ಟರು.

ಮಾರನೆಯದಿನ ಬೆಳಗ್ಗೆ ಎಂಟು ಗಂಟೆಗೆ ಕೆ. ಸಿ. ಟಿ ಯ ಸದಸ್ಯರೆಲ್ಲರೂ— ಕೊನೆಗೆ ಸಾಧ್ಯವಾದಷ್ಟು ಮುಂದಿಯಾದರೂ ಆಂಜನೇಯನ ಗುಡಿಯ ಹಿಂದುಗಡೆ ಹಾಜರಾಗಿರಬೇಕೆಂದು ನಿಶ್ಚಯವಾಯಿತು. ಬೆಟ್ಟ ಹತ್ತುವವರನ್ನು ಬೀಳ್ಕೊಡುವ

ಸಮಾರಂಭ ಅಲ್ಲಿ ನಡೆಯಬೇಕು. ಪತ್ರಿಕೋದ್ಯೋಗಿಗಳಿಗಾಗಲಿ ಊರಿನ ಜ್ಯಾರಿಗೇ ಆಗಲಿ ತಮ್ಮ ಈ ಸಾಹಸದ ಸುಳಿವು ಸಿಗಬಾರದು ಎಂದು ನಿರ್ಧಾರವಾಯಿತು. ಹಾಗೆ ವಿಷಯವನ್ನು ಗೌಪ್ಯವಾಗಿಡಲು ಎಲ್ಲ ಸದಸ್ಯರೂ ಒಪ್ಪಿದರು. ಆಂಜನೇಯನ ಆಣೆಯಿಟ್ಟು ಹಾಗೆ ಭರವಸೆಯೊಪ್ಪಿಸಲು ಯಾರೂ ಹಿಂಜರಿಯಲಿಲ್ಲ. ಆದರೆ ವಾಮನ ಮೂರ್ತಿಯೊಬ್ಬನನ್ನ ಒದ್ದೋಡಿಸಿಯಾಗಿದ್ದುದರಿಂದ ಅವನೊಬ್ಬ ತಪ್ಪಿಸಿಕೊಂಡ.

ಮಾರನೆದಿನ ಬೆಳಗ್ಗೆ ಎಂಟು ಗಂಟೆಗೆ ಮೊದಲೇ ಇತರ ಸದಸ್ಯರೆಲ್ಲ ಆಂಜನೇಯ ಗುಡಿ ಹಿಂದಿನ ಪೇರಳೆ ಮರಪಡಿಯಲ್ಲಿ ಹಾಜರಾಗಿದ್ದಾರೆ. ಕ್ಯಾಪ್ಟನ್ ಬಂದಿದಾನೆ. ಒಂದು ಕೈಚೀಲ ತುಂಬ ಬಾಳೆಹಣ್ಣಿನ ಚಿಪ್ಪು. ವಾಸು, ದೋಸೆಯ ಗಂಟಿನೊಡನೆ ಬಂದು ಸೇರಿದ್ದಾನೆ. ತಾಯಿ ಮಾಡಿ ಮಾಡಿ ಪೇರಿಸಿಟ್ಟಿದ್ದ ರಾಶಿಯಿಂದ ಅಷ್ಟು ದೋಸೆಗಳನ್ನು ಹಾರಿಸಲು ತಾನು ಮಾಡಿದ ಸಾಹಸವನ್ನೂ, ದುರ್ದೈವವಶಾತ್ ಥರ್ಮಾಸ್ ಫ್ಲಾಸ್ಕನ್ನು ಬೀರುವಿನಿಂದ ಇಳಿಸುವಾಗ ಅವರಪ್ಪನ ಕಣ್ಣಿಗೆ ಬಿದ್ದುದರಿಂದ ಕೆನ್ನೆಗ ಎರಡೇಟು ದೊರಕಿಸಿಕೊಂಡಿದ್ದನ್ನೂ, ಆದರೂ ತಾನು ಎದೆಗೆಡದೆ ಪಾತ್ರೆಗಳ ಗೂಡಿನಿಂದ ರೈಲುಚೊಂಬನ್ನು ಹಾರಿಸಿ ಅದರಲ್ಲಿ ಕಾಫಿ ತುಂಬಿಕೊಂಡು ತಂದಿದ್ದನ್ನೂ, ವರ್ಣಿಸಿ ವರ್ಣಿಸಿ ಗೆಳೆಯರ ಬಾಯಲ್ಲಿ ನೀರೂರುವಂತೆ ಹೇಳುತ್ತಿದ್ದಾನೆ. ಅಷ್ಟರಲ್ಲಿ ವೆಂಕು, ಶಿವಲಿಂಗು ಶೇಶಪ್ಪನ ಹೋಟಲಿನ ಮಸಾಲೆ ಕಟ್ಟಿನೊಡನೆ ದಯಮಾಡಿಸಿ ದರು. ಭೀಮು ಮಾತ್ರ ಪತ್ತೆಯಿಲ್ಲ. ಮಹರಾಯ ಇಡ್ಲಿಗಾಗಿ ಹೊಂಚುಹಾಕುತ್ತಾ ಅಲ್ಲೇ ಕೂತನೋ ಅಥವಾ ಕಟ್ಟಿಕೊಂಡು ಬರುತ್ತಿರುವಾಗ ಬಾಯಿ ಚಪಲ ತಡೆಯ ಲಾರದೆ ಬಕಾಸುರನಿಗೆ ಕವಳ ತುಂಬಿಕೊಂಡು ಹೊರಟ ಆ ಭೀಮಸೇನನ ಹಾಗೆ ದಾರಿಯಲ್ಲೇ ಇಡ್ಲಿಗಳನ್ನ ಸ್ವಾಹಾ ಮಾಡ್ತಾ ಇದಾನೆಯೋ ಎಂದೆಲ್ಲ ಶಂಕೆಗಳು ಮೂಡಿದವು. ಅಥವಾ ಈ ವಾಮನಮೂರ್ತಿಯ ಕಿತಾಪತಿಯಿಂದ ಭೀಮು ತಂದೆ ಗೇನಾದರೂ ಈ ಸಮಾಚಾರ ಕಿವಿಗೆ ಬಿದ್ದಿರಬಹುದೋ ಎಂಬ ಅಧೈರ್ಯವೂ ಕಾಣಿಸಿಕೊಂಡಿತು. ಏಕೆಂದರೆ ಭೀಮು ಪಕ್ಕದ ಮನೆಯಲ್ಲೇ ವಾಮನಮೂರ್ತಿ ಇರುವುದು. ಆದದ್ದಾಗಲಿ ಆಂಜನೇಯನನ್ನ ಪ್ರಾರ್ಥಿಸಿಕೊಂಡು ನಾವು ನಾಲ್ಕು ಮಂದಿ ಹೊರಟು ಬಿಡೋಣ ಎಂದುಕೊಂಡು ಎಲ್ಲರೂ ಗುಡಿ ಮುಂದೆ ಬಂದು ಆಂಜ ನೇಯನಿಗೆ ಕೈಮುಗಿದರು. ನೆರೆದಿದ್ದವರಿಗೆಲ್ಲ ಬಾಳೆಹಣ್ಣಿನ ವಿನಿಯೋಗವಾಯಿತು. ಒಂದು ಚಿಪ್ಪನ್ನು ಮಾತ್ರ ಕಾದಿರಿಸಲಾಯಿತು. ಮೊದಲು ಕೊಂಡಯ್ಯನ ಬೆಟ್ಟಕ್ಕೂ ಅನಂತರ ಕ್ಯಾಪ್ಟನ್ ಹಜಾರೆ ಹಾಗೂ ಸಂಗಡಿಗರಿಗೆ, ಆಮೇಲೆ ಕ್ರಿಕೆಟ್ ಟೀಮಿಗೆ, ಕೊನೆಗೆ ತೇನ್‌ಶಿಂಗನಿಗೂ ಕೂಡ ಜಯಕಾರಗಳೂ ಜಿಂದಾಬಾದುಗಳೂ ನಡೆದುವು. ಎಲ್ಲರಿಂದಲೂ ಬೀಳ್ಕೊಂಡು ಆರೋಹಿಗಳು ಹೊರಟೇಬಿಟ್ಟರು. ಭೀಮು ಮಾತ್ರ ಪತ್ತೆಯಿಲ್ಲ ಆದರೆ, ಗಂಟೆ ಆಗಲೇ ಎಂಟೂವರೆಯಾಗಿತ್ತು. ಈ ಬೀಳ್ಕೊಡುವ ಸಮಾರಂಭಕ್ಕೆ ಪತ್ರಿಕೋದ್ಯೋಗಿಗಳಿಗೆ ಪ್ರವೇಶವಿರಕೂಡದೆಂದು ಮೊದಲೇ ನಿರ್ಧಾರ ವಾಗಿದ್ದುದರಿಂದ ಯಾವ ಸುದ್ದಿಗಾರನೂ ಬಂದಿರಲಿಲ್ಲ. ಆದರೇನು? ಪರ್ವತಾ

ರೋಹಣ ಪ್ರಸಂಗ ಗುಟ್ಟಾಗಿ ಉಳಿಯಲಿಲ್ಲ. ಯಾರಾದರೊಬ್ಬ ಸುದ್ದಿಗಾರನು 'Coup' ಮಾಡಿದ್ದರಿಂದ ಗುಟ್ಟು ರಟ್ಟಾದ್ದಲ್ಲವೆಂಬುದೇನೋ ನಿಜ. ಆದರೆ ವಾಮನ ಮೂರ್ತಿಯನ್ನು ಮರೆತಿಲ್ಲ ತಾನೆ? ಕ್ಯಾ|| ಇಜಾರಿ ಹಾಗೂ ಸಂಗಡಿಗರ ಮನೆಗಳಲ್ಲಿ ಮೊತ್ತಮೊದಲು ಸುದ್ದಿಯನ್ನು ಬಿತ್ತಿ ಅನಂತರ ಮಿಡ್ಲ್ ಸ್ಕೂಲ್ ಹೆಡ್ಮೇಸ್ಟರ ತನಕವೂ ಅದನ್ನು ವರದಿಮಾಡುವ ಕೆಲಸವನ್ನು ಆತ ಶ್ರದ್ಧೆಯಿಂದ ನಡೆಸಿದ. ವಾಮನ ಮೂರ್ತಿಯ ಈ ಸತ್ಕಾರ್ಯದ ಮೊದಲನೆಯ ಪರಿಣಾಮವೆಂದರೆ ಭೀಮು ಇಡ್ಲಿ ಗಳನ್ನು ಬಾಳೆಲೆಯಲ್ಲಿ ಸುತ್ತುತ್ತಿರುವಾಗಲೇ ಅವರ ಸೋದರತ್ತೆಯ ಕೈಗೆ ಸಿಕ್ಕಿ ಬಿದ್ದಿದ್ದು. ಅನಂತರ ತಂದೆಯವರಿಂದ ಯಥಾನುಶಕ್ತಿ ಪಾದಪೂಜೆ ಮಾಡಿಸಿ ಕೊಂಡಿದ್ದು. ಪರ್ವತಾರೋಹಿಗಳ ತಂಡವನ್ನು ಸೇರಲಾರದೆ ಹೋದದ್ದು. ಮುಖ್ಯ ವಾದ ಇನ್ನೊಂದು ಪ್ರತಿಕ್ರಿಯೆಯನ್ನಂತೂ ನೀವು ಊಹಿಸಿರಬಹುದು. ವಿಜಯಿ ಗಳಾಗಿ ಹಿಂದಿರುಗುವ ಸಾಹಸಿಗರನ್ನು ಸ್ವಾಗತಿಸಲು ಸಂಬಂಧಪಟ್ಟ ಹಿರಿಯರು ಸಿದ್ಧತೆಗಳನ್ನು ನಡೆಸಿದ್ದು ಆ ವಿಚಾರವಿರಲಿ.

ಆರೋಹಿಗಳ ತಂಡ ಬೆಟ್ಟದ ತಪ್ಪಲನ್ನು ತಲುಪಲು ಕೇವಲ ಅರ್ಧ ಗಂಟೆ ಸಾಕಾಗಬಹುದಾಗಿದ್ದರೂ ಯಾವುದೋ ಕಾರಣದಿಂದ ಅವರು ಅಲ್ಲಿ ಸೇರುವಾಗ ಗಂಟೆ ಹತ್ತೂವರೆಯಾಗಿತ್ತು. ಊರ ಅಂಚಿನಲ್ಲಿರುವ ಶಿರಸ್ತೇದಾರರ ಮನೆ ತೋಟದ ಸೀಬೆಮರವು ರಸ್ತೆಯ ಕಡೆಗೆ ಬಾಗಿದ್ದುದು ಒಂದು ಮುಖ್ಯ ಕಾರಣವೆಂದಿಟ್ಟುಕೊಳ್ಳ ಬೇಕು. ಅಂತೂ ಮೊದಲನೆಯ ಕ್ಯಾಂಪನ್ನು ಬೆಟ್ಟದ ಬುಡದಲ್ಲಿ ಹೂಡಿ ಮಸಾಲೆ ಗಳಲ್ಲಿ ನಾಲ್ಕನ್ನು ಮುಗಿಸಿ ಕಾಫಿ ಹೀರಿದರು ಅನಂತರ ಒಂದೊಂದು ಮೈಲುಗಳ ಅಂತರದಲ್ಲಿ ಎರಡನೇ ಮತ್ತು ಮೂರನೇ ಕ್ಯಾಂಪುಗಳನ್ನು ಮಾಡಲಾಯಿತು. ಅಲ್ಲಿಯೂ ಯಥಾಪ್ರಕಾರ ಅಷ್ಟಷ್ಟು ಸೇವಿಸಲಾಯಿತು. ಹೀಗೆ ಖಾಲಿಯಾಗುತ್ತ ಬಂದ ಕೈ ಚೀಲಗಳಲ್ಲಿ ನಡು ನಡುವೆ ಕಲ್ಲು ಬೀರಿಯೋ ಮರವನ್ನೇ ಏರಿಬಿಟ್ಟೋ ಸಂಗ್ರಹಿಸಿದ ಫಲ ಮೂಲಾದಿಗಳನ್ನು ತುಂಬಿಸಲಾಯಿತು ಚೀಲಗಳು ತುಂಬಿದಾಗ ಅವುಗಳನ್ನು ದಾರಿಯ ಒಂದು ಮರದ ಪೊಟರೆಯಲ್ಲಿ ಮುಚ್ಚಿಟ್ಟು ಮುಂದುವರಿದರು.

ಕ್ಯಾಂಪ್ ೧ರಲ್ಲಿ, ಕ್ಯಾ|| ಇಜಾರಿಯ 'ಷೆರ್ಪಾ'—ಅಂದರೆ ಗೌಳಿಗರ ಹುಡುಗ ರಾಚ, ಆರೋಹಿಗಳ ತಂಡವನ್ನ ಸೇರಿಸಿಕೊಂಡದ್ದನ್ನು ಪ್ರಸ್ತಾಪಿಸಲು ಮರೆತಿದ್ದೆ ಮೊದಲಿಗೇನೋ ಆತ ಇವರ ಬೆಂಗಾವಲಿಗೆ ಬರಲೊಪ್ಪಲಿಲ್ಲ ಆದರೆ ಶಿವ್ಲಿಂಗು ಮಸಾಲೆ ಪೊಟ್ಲವನ್ನು ಚೀಲದಿಂದ ತೆಗೆದು ಅವನ ಮೂಗಿಗೆ ಹಿಡಿದದ್ದರಿಂದ ಆತ ಬಲುಬೇಗನೆ ವಶನಾದ ಅವನನ್ನು ಜೊತೆಗೆ ಒಯ್ದಿದ್ದರಿಂದ ಒಂದೂವರೆ ಮಸಾ ಲೆಗೆ ಎರವಾಗಬೇಕಾಯಿತಾದರೂ ಆದರಿಂದ ದೊರೆತ ಫಲವೇನೋ ಸಮಾಧಾನ ಕರವಾಗಿತ್ತು. ಆತ ಮರ ಏರುವುದರಲ್ಲಿ ಕೋತಿಗಳನ್ನು ನಾಚಿಸಬಲ್ಲವನು ಸಿಳ್ಳಂ ಗೋವಿನ ಸೊಗಸಾಗಿ ಬಾರಿಸುತ್ತಾನೆ. ಬೆಟ್ಟದ ಯಾವ ಮೂಲೆಯಲ್ಲಿ ಯಾವ

ಹಣ್ಣಿನ ಮರ ಇದೆ, ಯಾವ ಹಕ್ಕಿಗಳ ಮೊಟ್ಟೆಗಳು ಎಲ್ಲಿ ಸಿಗಬಲ್ಲವು ಎಂಬ ವಿವರ ಗಳೆಲ್ಲ ಅವನಿಗೆ ತರತಲಾಮಲಕ. ಕ್ಯಾಂಪ್ ಮೂರರ ಸಮೀಪ ಆತ ಒಂದು ಮರವನ್ನೇರುತ್ತಿದ್ದಾಗ ತನ್ನ ತಲೆಯ ಪಕ್ಕದಲ್ಲಿದ್ದ ಕೊಂಬೆಯೊಂದರಲ್ಲಿ ಜೋಗಾಲಿ ಯಾಡುತ್ತಾ ದಿಟ್ಟತನದಿಂದ ತನ್ನನ್ನು ಹಲ್ಲುಕಿರಿದು ಅಣಕಿಸಿದ ಧೂರ್ತ ವಾನರ ವೊಂದರ ಲಾಂಗೂಲವನ್ನು, ಯಾವ ಮಾಯೆಯಿಂದಲೋ ಹಿಡಿದು, ಅದನ್ನು ಕ್ಷಣ ಕಾಲ ಗೋಪುಗುಟ್ಟಿಸಿ ಅದರಿಂದ ಪರಚಿಸಿ ಕಚ್ಚಿಸಿಕೊಂಡಾಗ, ಕ್ಯಾ|| ಇಜಾರಿ ಮತ್ತು ಸಂಗಡಿಗರ ಸಂಭ್ರಮ ಸಂತೋಷಗಳಿಗೆ ಮೇರೆಯಿಲ್ಲವಾಯಿತು. ಅವರು ಪೆರ್ಪಾ ರಾಜನನ್ನು ಮುಕ್ತಕಂಠದಿಂದ ಹೊಗಳಿದರು. ಆ ತಕ್ಷಣವೇ ಶಿವಲಿಂಗು ಪಾಲಿನ ದಾಗಿ ಉಳಿದಿದ್ದ ಅರ್ಧ ಮಸಾಲೆಯನ್ನು ಆ ಧೀರನಿಗೆ ಅರ್ಪಿಸಲಾಯಿತು. ಮಾತ್ರ ವಲ್ಲದೆ ಆ ಕೂಡಲೆ "ಟೈಗರ್ ಆಫ್ ಕೊಂಡಯ್ಯನ ಬೆಟ್ಟ" ಎಂಬ ಬಿರುದನ್ನು ಅವನಿಗೆ ಕೊಟ್ಟು ಜಯಕಾರಮಾಡಿ ಅವನನ್ನೊಮ್ಮೆ ಮೇಲಕ್ಕೆತ್ತಿ ನೆಲಕ್ಕೆ ಕುಕ್ಕಿದರು (ಕೇವಲ ಸಂತೋಷಾತಿಶಯದಿಂದ).

ಅವರ ಆರೋಹಣ ಎಷ್ಟೊಂದು ಲೀಲಾಜಾಲವಾಗಿ ಸಾಗಿತ್ತೆಂದರೆ ಮೂರನೆ ಕ್ಯಾಂಪ್ ಸೇರುವ ಹೊತ್ತಿಗೆ ಮುಖವೆಲ್ಲ ಕೆಂಚಗಾಗಿಹೋಗಿದ್ದ ವಾಸು ಕೂಡ "ತೇನ್‌ಶಿಂಗನ ಕಡೆಯವರು ಹಿಮಾಲ್ಯ ಹತ್ತಿದರೇನಾಯಿತ್ರೋ, ಇಂಥಾ ಮಜಾ ಅವರಿಗೆಲ್ಲಿ ತಾನೆ ಇತ್ತು?" ಎಂದು ಉದ್ಗರಿಸುವಂತಾಯಿತು.

ಅವರ ಲೀಲಾ ವಿನೋದಗಳ ವೈಖರಿ ನಿಜವಾಗಿಯೂ ಹಾಗನ್ನುವಂತಿತ್ತು. ಆದರೆ ಕಿತ್ತುಕೊಳ್ಳುತ್ತಿದ್ದ ಬೆವರನ್ನು ಒರೆಸಿ ಒರೆಸಿ ಸುಸ್ತಾಗಿ ಕೊನೆಗೆ ಹಾಗೆಯೇ ಹರಿಯಬಿಟ್ಟಿದ್ದ ಶಿವ್ಲಿಂಗು ಮಾತ್ರ ಹೀಗಂದ—"ಹಿಮಾಲ್ಯಗಲ್ಲಿದ್ದ ಹಾಗೆ ಇಲ್ಲಿನೂ ಮಂಜುಗಡ್ಡೆಗಳಿದ್ದಿದ್ರೆ ಸೊಗ್ಸಾಗ್ರಿತ್ತು. ಈ ಬಂಡೆ ಚೂರುಗಳ ಬದಲೀಗೆ" ಆಗ ಕ್ಯಾಪ್ಟನ್ ಇಜಾರಿ ಹೀಗೆ ಹೇಳಿ ಅವನ ಅಭಿಪ್ರಾಯವನ್ನು ಬದಲಿಸಿದ. "ಹಿಮಾಲ್ಯ ದಲ್ಲಿದ್ದ ಹಾಗೆ ಹಿಮ ಬೇಕು ಅಂತೀಯಾ? ಆದರೆ ನೋಡು ಎಷ್ಟು ಜನ ಹಿಮಾಲ್ಯ ಹತ್ತೋದಕ್ಕೆ ಹೊರಟು ಹಿಮದಲ್ಲೇ ಸಮಾಧಿ ಕಟ್ಕೊಂಡಿದಾರೆ ಗೊತ್ತೇನು ನಿಂಗೆ? ಅಷ್ಟಲ್ದೆ ಹಿಮಾಲ್ಯ ಹತ್ತೋರು ತಿನ್ನೊ ಕುಡಿಯೋ ಫಜೀತಿ ಬೇಡ. ಎಂಥದೇ ಇರಲಿ ಕೈಯಿಂದ ತೆಗೆದು ಬಾಯಿಗೆ ಮುಟ್ಸೋದ್ರೊಳಗೆ ಹಿಮಗಡ್ಡೆ ಆಗಿಬಿಡತ್ತಂತೆ! ಯಾರಿಗ್ ಬೇಕ್ ಆ ಗೋಳು!!" ಆಗ ಸಂಗಡಿಗರಿಗೆಲ್ಲ ನಿಜ ನಿಜ ಅನ್ನಿಸಿತು. ಉರಿ ಬಿಸಿಲೇ ಆ ಹಿಮಗಡ್ಡೆಗಳಿಗಿಂತ ವಾಸಿ ಅನ್ನಿಸಿತು. ಆದರೂ ... ...

"ಆದರೂ ಒಂದಿಷ್ಟು ನೀರು ಹಿಡಕೊಳ್ದೇ ಇದ್ದಿದ್ದು ತಪ್ಪಾಯಿತು"—ಎಂದ ವೆಂಕು. ಅದು ನಿಜ.

ಅಷ್ಟರಲ್ಲಿ ಕ್ಯಾಪ್ಟನ್ ಹೇಳಿದ "ನಾಲ್ಕನೇ ಕ್ಯಾಂಪ್ ಇಲ್ಲೇನೆ ಮಾಡಿಬಿಡೋಣ. ಹಸಿವೂ ಆಗ್ತಾ ಇದೆ. ಆ ದೋಸೆ ಚೀಲ ತನ್ರೋ"

ವಾಸುವಿನ ತಾಯಿ ಅಳಿಯಸ್ಸಿಗೆ ಮಾಡಿದ್ದ ಮೆಂತ್ಯದ ದೋಸೆಗಳು ಹೊರ ಬಂದುವು. ಆ ದೋಸೆಗಳೋ, ಮತ್ತೆ ಆ ಚಟ್ಣಿಯೋ, ಬಲು ರುಚಿ ಬಲು ರುಚಿ! ನಗುತ್ತಾ ಹರಟುತ್ತಾ ಬಾಯಿಗೆ ತುಂಬಿಕೊಂಡಿದ್ದೇ ತುಂಬಿಕೊಂಡಿದ್ದು! ಮುಕ್ಕಾಲು ಭಾಗ ತಿಂದ ಮೇಲೆ ಕೈಲು ಚೊಂಬು ತೆರೆದು ನೋಡಿದರೆ ತಳದಲ್ಲಿ ಒಬ್ಬೊಬ್ಬರಿಗೆ ಒಂದೊವರೆ ಚಮುಚ ಬರುವಷ್ಟು ಮಾತ್ರ ತಣಿದುಹೋದ ಕಾಫಿ ಉಳಿದಿತ್ತು. ಕಾಫಿ ಯೇನು....ಚರಟ ಅನ್ನಿ. ಕುಡಿದರೂ ಒಂದೇ ಬಿಟ್ಟರೂ ಒಂದೇ. ಆದರೆ ಬಾಯಾರಿಕೆ ಅಸಾಧ್ಯ. ತೆಂಗಿನಕಾಯಿ ಚಟ್ಣಿಗೆ ಉಪ್ಪು ಜಾಸ್ತಿಯೆಂದು ತಿಳಿದಿದ್ದು ನೀರಿಲ್ಲವೆಂದು ಗೊತ್ತಾದಾಗ. "ನಮ್ಮಕ್ಕ ಮಾಡಿದ್ದು ಕಣ್ರೋ ಚಟ್ನಿ! ಅವಳು ಯಾವಾಗಲೂ ಹಾಗೇನೆ—ಭಾವ ಬಂದಿದ್ದಾರೇಂದ್ರೆ ಸರಿ. ಎಲ್ಲದಕ್ಕೂ ಎರಡೆರಡು ಸಲ ಉಪ್ಪು ಹಾಕಿಬಿಡ್ತಾಳೆ"— ಎಂದು ಮೂಗಲ್ಲಿ ನೀರು ಸುರಿಸುತ್ತಾ ಅಕ್ಕನನ್ನು ಟೀಕಿಸಿದ ವಾಸು. ವಸ್ತು ಸ್ಥಿತಿ ಬೇರೆಯಾಗಿತ್ತು ಸ್ವಲ್ಪ ನೀರು ಬೆರೆಸಿ ಹದಮಾಡುವ ಮೊದಲೇ ಅರೆದಿಟ್ಟ ಉಂಡೆಯಿಂದ ಒಂದಿಷ್ಟು ಚಟ್ಣಿ ಲಪಟಾಯಿಸಿ ತಂದರೆ ಮತ್ತೇನಾಗುತ್ತದೆ! ಅಂತೂ ಎಲ್ಲರಿಗೂ ಬಾಯೊಣಗಿಬಂತು. ವಿಪರೀತ ದಾಹ. ಬೆಟ್ಟದ ಮೇಲಿನ ಸಿಹಿ ನೀರಿನ ಕೆರೆಗೆ ಇನ್ನೂ ಅರ್ಧ ಮೈಲಿ ಕಡಿದಾದ ದಾರಿಯಲ್ಲಿ ನಡೆಯಬೇಕು. ಮೇಲೇರಿದ ಹಾಗೆ ದೊಡ್ಡ ಮರಗಳಿಲ್ಲ. ಬರೇ ತುರುಚಲು ಗಿಡಗಳು. ಆದರೆ ಬೇಗನೆ ಹೇಗಾದರೂ ಓಡಿ ತುದಿ ತಲಪದಿದ್ದರೆ ನೀರಡಿಕೆಯಿಂದ ಸಾಯುವುದೇ ಸರಿ. ಒಟ್ಟು ಪರೀಕ್ಷೆಯ ಕಾಲ ಬಂತು. ಬೇಗನೆ ಕ್ಯಾಂಪ್ ಬಿಟ್ಟು ಮುನ್ನಡೆಯ ತೊಡಗಿದರು. ಸದ್ದಿಲ್ಲದೆ ನಡೆದರು. ಶಿವ್ಲಿಂಗು ಮತ್ತು ವಾಸುವಿನ ರಥಗಳು ಏನೇನೂ ಸಾಗಲಿಲ್ಲ. ಹಿಂದಿನಿಂದ ರಾಜ ಅವರಿಬ್ಬರನ್ನೂ- ಕೊಂಚ ಎತ್ತಿ ಕೊಂಚ ದಬ್ಬಿ ಮುನ್ನಡೆಸಬೇಕಾಯಿತು. ನಮ್ಮ ಸಾಹಸಿಗರು ತಮ್ಮ ಪರ್ವತಾರೋಹಣದ ಕೊನೆಯ ಹಂತದಲ್ಲಿ ಪಟ್ಟಪಾಡನ್ನು ನಾನು ವರ್ಣಿಸಲಾರೆ. ಅಂತೂ ಮೂರು ಗಂಟೆಯ ಹೊತ್ತಿಗೆ ಕೊಂಡಯ್ಯನ ಬೆಟ್ಟದ ತುತ್ತತುದಿಯನ್ನು ಸೇರಿದರೆಂದು ಮಾತ್ರ ಹೇಳುತ್ತೇನೆ. ಹಾಗೆ ತುದಿ ಏರಿದೊಡನೆ ಅವರು ತೇನ್‌ಸಿಂಗ ಹಿಲ್ಲಾರಿಗಳಂತೆ ಧ್ವಜನೆಡಲು ಹೋಗಲಿಲ್ಲ ಫೋಟೋ ತೆಗೆಯಲು ಕೈಹಚ್ಚಲಿಲ್ಲ. ಹೆಚ್ಚೇನು ಸುತ್ತ ಮುತ್ತ ನೋಡಲೇ ಇಲ್ಲ. ನೇರ ಕೊಳದಂಚನ್ನು ಸೇರಿದರು. ಬೊಗಸೆ ಬೊಗಸೆಯಾಗಿ ಮೊಗೆದು ನೀರು ಕುಡಿದರು ಒಬ್ಬೊಬ್ಬರು ಎಷ್ಟೆಷ್ಟು ಕುಡಿದರು ಎಂದು ಕೇಳಬೇಡಿ.

ನೀರು ಕುಡಿದ ಮೇಲೆಯೂ "ಹಾಯ್ ಹೋದ ಜೀವ ಬಂತು ಕಣ್ರೋ"— ಎಂದು ಉದ್ಗಾರ ತೆಗೆದದ್ದು ಕ್ಯಾ!! ಇಜಾರಿ ಮತ್ತು ರಾಜ ಮಾತ್ರ ಉಳಿದ ಮೂವರು ತಡಿದುಬಿದ್ದ ಬಳ್ಳಿಗಳ ಹಾಗೆ ಅಲ್ಲಲ್ಲಿಯೇ ಬಂಡೆಯಮೇಲೆ ಒರಗಿಕೊಂಡರು. ಆಗ ಕಟ್ಟಕಡೆಗೆಂದು ಉಳಿದಿದ್ದ ಬಾಳೆಹಣ್ಣಿನ ಚಿಪ್ಪು ಹೊರಬಂತು. ವಾಸುವನ್ನ ಮುಟ್ಟಿ "ತೊಗೊಳ್ಳೊ ಬಾಳೆಹಣ್ಣು" ಅಂದರೆ ಅವನದು ಸದ್ದಿಲ್ಲ ಮುಟ್ಟಿ ಅಲುಗಾಡಿಸಿದರೆ

"ತಲ್ಪೋವು ಕಣೋ"—ಅಂತಾನೆ ಶಿವ್ಲಿಂಗೂ ಕೂಡ ಹಾಗೆಯೇ. "ನೀವೇ ತಿನ್ರೋ ನಂಗ್ಬೇಡ. ..ತಲೆಸುತ್ತುತ್ತೆ" ಅಂತಾನೆ. ಮತ್ತೊಂದು ಕ್ಷಣದಲ್ಲಿ ವಾಸು ವಕ್ರವಕ್ರವಾಗಿ ಸದ್ದುಮಾಡಿ ಬಳ ಬಳ ಬಳ ಎಂದು ಕಾಫಿ, ದೋಸೆ, ಇದ್ದದ್ದು, ಇಲ್ಲದ್ದು, ಎಲ್ಲವನ್ನೂ ಹೊರತಳ್ಳುತ್ತಿದಾನೆ. ಅಮ್ಮಾ! ಅಪ್ಪಾ! ಅಕ್ಕಾ! ಅಂತ ಬೇರೆ ಶುರುಹಚ್ಚಿದಾನೆ. ಮೈಮುಟ್ಟಿ ನೋಡಿದರೆ ಕೆಂಡಾಮಂಡಲ ಜ್ವರ. ಇದನ್ನೆಲ್ಲ ಕಂಡು, ಉಳಿದವರಲ್ಲಿದ್ದ ಅಲ್ಪಸ್ವಲ್ಪ ಉತ್ಸಾಹವೂ ಇಂಗಿಹೋಯಿತು. ಹಣ್ಣು ಕಾಯಿ ತುಂಬಿಕೊಂಡಿದ್ದ ಕೊಳವ ಪಕ್ಕದ ಹಣ್ಣಿನ ಮರಗಳೂ ಕೂಡ ಅವರನ್ನ ಹುರಿದುಂಬಿಸಲು ಸಮರ್ಥವಾಗಲಿಲ್ಲ. ಈ ಸ್ಥಿತಿಯಲ್ಲಿ ಬೆಟ್ಟ ಇಳಿಯೋದು ಹೇಗಪ್ಪಾ ಎಂಬುದೊಂದು ಸಮಸ್ಯೆಯಾಯಿತು. ಬಾಳೆಹಣ್ಣು ಕೂಡ ಅಲ್ಲಿಯೇ ಉಳಿಯಿತು. ವೆಂಕು ತನಗೆ ಯಾವುದೋ ಸೊಪ್ಪು ಗೊತ್ತಿದೆ ಅದರ ರಸ ಕುಡಿದರೆ ಎಲ್ಲ ಸರಿಹೋಗುತ್ತೆ ಎಂದು ತನ್ನ ವೈದ್ಯಕ್ಕೆ ತೊಡಗಿದ. ರಾಜನೂ ನಿಜ ಎಂದ. ವಾಂತಿ ನಿಲ್ಲೋದಕ್ಕೆ ತನಗೊಂದು ಹಣ್ಣಿನ ರಸ ತಿಳಿದಿದೆ ಅಂದ. "ಸೊಪ್ಪಾದರೆ ಸೊಪ್ಪು ಹಣ್ಣಾದರೆ ಹಣ್ಣು ಸದ್ಯ ತೊಗೊಂಬನ್ನಿ ಬೇಗ" ಎಂದ ಕ್ಯಾಪ್ಟನ್. ಅವನು ಅಷ್ಟು ಅಧೀರನಾದದ್ದು ಎಂದೂ ಇಲ್ಲ. "ನಾಸಾಯ್ತೀನೋ ಕ್ಯಾಪ್ಟನ್" ಅಂತ ೧೩ ವರ್ಷದ ಹೀಚು ನರಳ್ತಾ ಇರುವಾಗ ಯಾರುತಾನೇ ಸಹಿಸಬಹುದು!

ಅಷ್ಟರಲ್ಲಿ ಸಂಜೀವಿನಿ ತರಲು ಹೊರಟಿದ್ದ ರಾಜ ದೂರದಲ್ಲಿ ಯಾರೋ ಒರುತ್ತಿರುವುದನ್ನು ಕೂಗಿ ಹೇಳಿದ. ಸಮೀಪಿಸಿದಾಗ ತಿಳಿಯಿತು – ವಾಸು ಮನೆಯ ಆಳು ಮತ್ತು ವಾಸು ಚಿಕ್ಕಪ್ಪ.

ಇನ್ನು ಮುಂದಿನ ಸಮಾಚಾರ ತಿಳಿಸುವುದು ಬಹಳ ತೊಡಕಿನ ಕೆಲಸ. ವಾಸು ಚಿಕ್ಕಪ್ಪ ಅಂದರೆ ಶುದ್ಧ ದೂರ್ವಾಸ ಅಂತ ಎಲ್ಲರಿಗೂ ಗೊತ್ತು ಆತ ಛಡಿ ಹಿಡಕೊಂಡೇ ಬಂದಿದ್ದ. ಅದನ್ನು ಕಂಡಿದ್ದೇ ತಡ ರಾಜ ಅಂತೂ ಮೊದಲು ಪರಾರಿ ಉಳಿದವರು ಆದದ್ದಾಗಲಿ ಎಂದು ವಾಸುವಿನ ಪಕ್ಕದಲ್ಲೇ ನಿಂತರು. ಕೇಳಬೇಕಾದ್ದನ್ನೆಲ್ಲ ನಿದ್ದಿಲ್ಲದೆ ಕೇಳಿದರು. ತಂತಮ್ಮ ಮನೆಯವರು ಸ್ವಾಗತಕ್ಕೆ ಸಿದ್ಧರಾಗಿರುವುದನ್ನೂ ತಿಳಿದರು. ಆಗ ಅವರ ಮನಃ ಪಟದಲ್ಲಿ ಯಾವ ಚಿತ್ರಗಳು ಮೂಡಿದವೋ, ಕಾದಿದ್ದ ಗಂಡಾಂತರಗಳನ್ನು ತಪ್ಪಿಸಿಕೊಳ್ಳಲು ಯಾವ ಯಾವ ಉಪಾಯಗಳನ್ನು ಅವರ ಪ್ರತಿಭಾಶಕ್ತಿ ಒದಗಿಸುತ್ತಿತ್ತೋ, ನನಗೆ ತಿಳಿಯದು. ಅಂತೂ ಇಷ್ಟೊಂದು ಹೇಳಬಹುದು. ವಿಜಯಿಗಳಾಗಿ ಹಿಂದಿರುಗಿ ಸಂಗಡಿಗರಿಂದ ಭಲೆ ಎನ್ನಿಸಿಕೊಳ್ಳಬೇಕೆಂದಿದ್ದ ಅವರ ಆಸೆ ಪುಡಿಪುಡಿಯಾಯಿತು. ಅವರು ಯಾವ ಲೀಲಾ ವಿನೋದಗಳಿಂದ ಪರ್ವತಾಗ್ರವನ್ನು ಸೇರಿದರೋ ಅದೇ ಸಂಭ್ರಮ ಸಂತೋಷಗಳಿಂದ ಬೆಟ್ಟವನ್ನಿಳಿದು ಆಂಜನೇಯನಗುಡಿ ಆ ವಾರ ಸೇರಿದ್ದನ್ನ ಬಣ್ಣಿಸುವ ಸುಯೋಗ ಇಲ್ಲದೆ ಹೋಯಿತು. ಶಿವಲಿಂಗುವನ್ನೂ ವಾಸುವನ್ನೂ ಹೇಗೋ ಹೊತ್ತು ತಂದರು. ಉಳಿದವರು ಕುರಿಗಳಂತೆ ಹಿಂಬಾಲಿಸಿದರು.

ಊರು ಸೇರುವ ಹೊತ್ತಿಗೆ ಕ್ಯಾಪ್ಟನ್ ಇಜಾರಿ ಕಾಣೆಯಾಗಿದ್ದ. ಆ ದಿನ ರಾತ್ರಿಯೆಲ್ಲಾ ಅವನು ಯಾವುದೋ ಒಂದು ಮರದಮೇಲೆ ಕುಳಿತು ಕಳೆದ ಎಂದು ಸುದ್ದಿ. ಏನೇ ಇರಲಿ, ಮಾರನೆದಿನ ಅವನಪ್ಪ ಸಿದ್ದಪ್ಪ ಅವನ ಹದಿನೈದನೇ ಹುಟ್ಟಿದ ಹಬ್ಬವನ್ನು ಅಸಾಧಾರಣವಾದ ರೀತಿಯಲ್ಲಿ ನೆರವೇರಿಸಿದ. ಇತ್ತ K. C. T ಯ ಸದಸ್ಯರೆಲ್ಲ ಸೇರಿ ಆಗಲೇ ಚೇತರಿಸಿಕೊಂಡಿದ್ದ ವಾಸು ಮತ್ತು ಶಿವಲಿಂಗು—ಇವರ ಮುಂದಾಳ್ತನದಲ್ಲಿ ವಾಮನ ಮೂರ್ತಿಯನ್ನು ಹಿಡಿದು ತಕ್ಕಶಾಸ್ತಿಮಾಡಿದರು. ಅಂತೂ ತೇನ್‌ಸಿಂಗನ ಎವರೆಸ್ಟ್ ವಿಜಯವು ಕೊಂಡಯ್ಯನ ಹಳ್ಳಿ ಕ್ರಿಕೆಟ್ ಟೀಮ್‌ನವರಿಂದ ಅಸಾಧಾರಣ ರೀತಿಯಲ್ಲಿ ಆಚರಿಸಲ್ಪಟ್ಟಿತು. ಅಂದಿನಿಂದ ಕೊಂಡಯ್ಯನ ಬೆಟ್ಟವು K. C. T ಯ ಮಟ್ಟಿಗೆ ಪರ್ವತವೆಂದೇ ಆಗಿದೆ. ನಾವೂ ಒಪ್ಪೋಣ ಕೊಂಡಯ್ಯನ ಪರ್ವತವೇ ಧನ್ಯ ಧನ್ಯ! ಇಜಾರಿ, ವೆಂಕು. ಶಿವ್ಲಿಂಗು, ವಾಸು ರಾಜಾದಿಗಳೇ ಧನ್ಯರು ನೀವು! ತೇನ್‌ಶಿಂಗ—ನೀನೂ ಕೂಡ ಧನ್ಯ!

—ರಾಮಕೃಷ್ಣ



# ಕೆನಡಿಗರ ಕನಸು

ನಾನು ವಿಶ್ವಪರ್ಯಟನ ಮಾಡುವುದು ಸ್ವಾಭಾವಿಕ. ವಾರಕ್ಕೊಮ್ಮೆಯಾದರೂ ಪರದೇಶಗಳಿಗೆ ಹೋಗಿ ಬರುತ್ತಿರುತ್ತೇನೆ. ಏರ್ ಇಂಡಿಯಾ ಇಂಟರ್ ನ್ಯಾಷನಲ್‌ನ ಸೂಪರ್ ಕಾನ್ಸ್‌ಟಿಲೇಷನ್ 'ಜ್ಞಾನ್ಸಿರ್ಝಾಣಿ'ಯಲ್ಲಿ ಮೊದಲಬಾರಿ ಲಂಡನಿಗೆ ಹೋದೆ. ಅಲ್ಲಿ ಯಥಾಪ್ರಕಾರ ಭಾರತೀಯ ಉದ್ಯಮಗಳೆಲ್ಲಕ್ಕೂ ಸಂಭವಿಸುವ ಸ್ಥಿತಿಯೇ 'ಝ್ಝಾನ್ಸಿರಾಣಿ'ಗೂ ಸಂಭವಿಸಿತು. ಸದ್ಯ H. T. ಹಾಗೆ ಘಡ್ಡಾ ಆಗಲಿಲ್ಲ. ಎಂಥದೋ ಒಂದು ಭಾಗ ಕೆಟ್ಟುಹೋಗಿ ಹೊರಡಲು ತಡವಾಯಿತು.

ನಾನು ಆಗ, ಲಂಡನ್ನಿನಲ್ಲಿ ಅಲೆದಾಡುತ್ತಾ ರಿಟ್ಜ್ ಹೋಟೇಲಿಗೆ ಹೋಗಿ, ಷಾಂಪೇನ್ ತರಿಸಿದೆ. (ಅಲ್ಲಿ ಪಾನನಿರೋಧವಿಲ್ಲ)

ಕುಡಿದೆ. ಮತ್ತು ತಲೆಗೇರಿತು 'ತೆಂಕಣಗಾಳಿ ಸೋಂಕಿದೊಡಂ, ಮಧುಮಹೋತ್ಸವ ಮಾದೊಡಂ, ಏನನ್ ಎಂಬೆನ್' ಎಂದು ಹಾಡಲಾರಂಭಿಸಿದೆ.

'ನೀವು ಕನ್ನಡಿಗರೇ?' ಎಂದು ನನ್ನೆದುರು ಕುಳಿತಿದ್ದ ಬಿಳಿಯನೊಬ್ಬ ಕೇಳಿದ.

'ನಿಲ್ಲು ಯಾರುನೀನು?' ಎಂದು ಕೇಳಿದೆ.

'ನಾನು ಸಾಮರ್ಸೆಟ್ ಮಾಂ' ಎಂದ ಆತ.

'ಕನ್ನಡ ಬೇರೆ ಕಲಿತೆಯಾ?' ಎಂದೆ ನಾನು.

'ಕಲಿತು ಯಾವುದೋ ಕಾಲವಾಯಿತು ನನ್ನ ಸರ್ವಜ್ಞ ಉರುಫ್ ರತ್ನಮಾಲಾ ಎಂಬ ಕತೆಗಳನ್ನೋದಿಲ್ಲವೇ?'

'ಹೌದು ಮರ್ಮವೀರದಲ್ಲೊಂದು, ಕಥಾ ಮತದಲ್ಲೊಂದು ಬಂದಿತ್ತು ನಿನ್ನ Mr know all ಕಾಪಿ, ನೀನು ಅವರಮೇಲೆ ದಾವಾಏಕೆ ಹಾಕಬಾರದು?'

ಮಾಂ, ನಕ್ಕುಬಿಟ್ಟು ಹೇಳಿದ 'ಅಯ್ಯೋ ಅರಾಸೇ, ಅದನ್ನು ಬರೆದವನು ನಾನೇ ಬೇರೆ ಬೇರೆ ಹೆಸರಿನಲ್ಲಿ ಬರೆದೆ. ಅದಕ್ಕೇ ನನಗೆ ಸರ್ ಬಿರುದು ಸಿಕ್ಕಿದ್ದು.'

'ಅದುಸರಿ ಸರ್ ಮಾಂ. ನಿನಗೆ ಕನ್ನಡ ಯಾರು ಕಲಿಸಿದರು'

'ಜೇಮ್ಸ್ ಹಿಲ್ಟನ್ ಕಲಿಸಿದ. ಅವನು ರ್‍ಯಾಂಡಂ ಹಾರ್ವೆಸ್ಟನ್ನು ಕನ್ನಡ ಚಲಚಿತ್ರಕ್ಕೆ ಅಳವಡಿಸಿದಾನೆ ನಿನಗೆ ತಿಳಿಯದೇ?'

'ಸರಿ, ಆಮೇಲೆ?'

'ರಷ್ಯ ಇಂಗ್ಲಿಷ್ ಅಮೆರಿಕ ಸಾಹಿತಿಗಳೆಲ್ಲರೂ ಸೇರಿ ಒಟ್ಟಾವಾದಲ್ಲಿ ಕನ್ನಡ ಸಂಘವನ್ನು ತೆರೆದಿದೇವೆ. ಹಾರ್ಡಿ, ಅಜಿತಸೇನಾಚಾರ್ಯ ಅವರೆಲ್ಲರೂ ನಮ್ಮ ಸಂಘಕ್ಕೆ, ಸ್ವರ್ಗದಿಂದ ಬಂದು ಆಗಾಗ್ಯೆ ಸಲಹೆ ಕೊಡುತ್ತಾರೆ; ಹಾರ್ಡಿ ಮೊನ್ನೆ ಬಂದಾಗ 'ಗೂನೂರು ಎಗ್ಗಮ್ಮ' ಬರೆದೇಹೋದ. ನಿನಗೆ ಗೊತ್ತಿಲ್ಲವೇ?'

'ಸ್ವರ್ಗದಲ್ಲಿ ಕನ್ನಡ ಚಳುವಳಿ ಏನಾದರೂ ಇದೆಯಂತೋ?'

'ಹಾರ್ಡಿ ಹೇಳಿದ, ಬೇಕಾದಷ್ಟು ಪ್ರಬಲವಂತೆ. ವ್ಯಾಸ, ಶರತ್, ಗಾರ್ಕಿ, ಮೊಪಾಸಾ, ಚೆಕೋವ್ ಎಲ್ಲರೂ ಬರೆದ ಕನ್ನಡ ಪುಸ್ತಕಗಳು ಸ್ವರ್ಗದ ಮೂರುಕಟ್ಟೆಯಲ್ಲಿ ನುಗ್ಗಲು ಸೂರೆಯಂತೆ. ಸ್ವರ್ಗದಲ್ಲಿ ಉಳಿದ ಭಾಷೆಗಳ ಪ್ರಾಬಲ್ಯ ಕುಗ್ಗಿದೆಯಂತೆ. ಮೊಹಂಜೋದಾರೋ, ಹರಪ್ಪಾ, ಅರೇಬಿಯಾ ಎಲ್ಲಾ ಕನ್ನಡನಾಡಿನ ಅವ್ಯಾಹತಭಾಗಗಳಂತೆ. ಕನ್ನಡದ ಕಾವ್ಯದಧಿಪತಿ T. S. ಇಲಿಯಟ್ಟೇ ಆಗಿರಬೇಕೆಂದು ಬೃಹಸ್ಪತ್ಯಾಚಾರ್ಯರೂ, ಭೃಗುಮಹರ್ಷಿಗಳೂ ದೇವೇಂದ್ರನ ಮೂಲಕ ಒಂದು ಮೆಮೋವನ್ನು ಕುರಿತೋದದೆ ಕಾವ್ಯಪ್ರಯೋಗ ಪರಿಣತ ಮತಿಗಳಾದ ಕನ್ನಡಿಗರಿಗೆ ಜಾರಿ ಮಾಡಿದಾರಂತೆ.

ನಾನು ಆನಂದೋದ್ರೇಕದಿಂದ ಷಾಂಪೇನ್ ಬಸಿದು 'ಜೈ ಕನ್ನಡ ಮಾತಾ, ಎಂದೆ' ಮಾಂಗೆ ಇನ್ನೊಂದು ಬಾಟಲಿ ತರಿಸಿದೆ.

ಮಾಂ, ಮುಖ ಕನ್ನಡಾಭಿಮಾನದಿಂದ ಕಳೆಯೇರಿತು. "ಕನ್ನಡವೇ ಲೋಕ ಭಾಷೆ, ದೇವಭಾಷೆ, ಹಾರ್ಡಿ ಹೇಳಿದಾನೆ, ಸ್ವರ್ಗನರಕಗಳಲೆಲ್ಲಾ ಬರೀ ಕನ್ನಡವಂತೆ, ಕೆನಡಾದೇಶ ಕನ್ನಡದ ತಾಯ್ಮನೆ. ಇಂದಿನಕರ್ಣಾಟಕ ಅದರ ಒಂದು ಕಾಲೊನಿ ಅದಕ್ಕೆ ನಮ್ಮ ಕನ್ನಡ ಕೇಂದ್ರ ಒಟ್ಟಾವದಲ್ಲಿದೆ ಬೌದ್ಧಮತ ತನ್ನ ತಾಯ್ನಾಡಾದ ಭಾರತದಲ್ಲೇ ಕಣ್ಮರೆಯಾದಂತೆ ಕೆನಡಾದಲ್ಲಿ ಕನ್ನಡ ಆಗಿದೆ. ಈ ವಿಷಯದಲ್ಲಿ ಒಂದು ನಿರ್ಣಯವನ್ನು U. N. O ಜನರಲ್ ಅಸೆಂಬ್ಲಿ ಮುಂದೆ ತರಲಿದ್ದೇನೆ"

'ಹಾಗಾದರೆ ನಾನು ಆ ಮನವಿಗೆ ಸಹಿ ಹಾಕುತ್ತೇನೆ' ಎಂದು ಪೆನ್ನಿಗಾಗಿ ತಡಕಾಡುತ್ತಾ ಎದ್ದೆ.

ಎಚ್ಚರವಾಯಿತು. ಸುಪ್ರಭಾತ ಬೆಳಗುತ್ತಿತ್ತು. ನನ್ನ ಮಿತ್ರ ತಮ್ಮಣ್ಣಿ ಪೇಪರ್ ತೆಗೆದುಕೊಂಡು ಬಂದು ಹೇಳಿದ "ಎಲೋ ಕನ್ನಡಿಗಾಧಮಾ, ಬೆಂಗಳೂರು ತಮಿಳರದಂತೆ, ಧಾರವಾಡ ಮರಾಠಿಗರದಂತೆ, ದಾವಣಗೆರೆ ಪೋರ್ಚುಗೀಸ್ ಸ್ವಾಸ್ಥ್ಯವಂತೆ" ಪೇಪರಿನಲ್ಲಿ ಬಂದಿದೆ.

ಅ. ರಾ. ಸೇ.

# ಅರ್ಥ್ವಾಗೋದಿಲ್ಲ

"ಥೂ, ಇದೇನೇ ಇದು! ಹಾಳು ಆಲೂಗಡ್ಡೆ ಬಜ್ಜಿ ಮಾಡಿದೀಯಾ!"

"ಬಜ್ಜಿ ಬೇಡಾದ್ರೆ ಬಿಟ್ಟುಬಿಡಿ....ಮೂಲಂಗಿ ಹುಳಿ ಮಾಡಿದೀನಿ..."

"ಥೂ....ಮೂಲಂಗಿ ಹುಳೀನೆ?"

"ಅದ್ಯಾಕಂದ್ರೆ ಹಾಗನ್ನೋದು....ನಿನ್ನೇನೂ ಅದೇ ಮಾಡಿದ್ದೆನಲ್ಲ ಚೆನ್ನಾಗಿ ಹೊಡೆದರಿ..."

"ನಿನ್ನೆ ಅಂತ ಏನು? ಈ ವಾರವೆಲ್ಲ ಆಲೂಗಡ್ಡೆ, ಮೂಲಂಗಿ....ಮೂಲಂಗಿ ಆಲೂಗಡ್ಡೆ ...ಅದೇ ಬಜ್ಜಿ....ಅದೇ ಹುಳಿ"

"ಹೌದು ವಾರವೆಲ್ಲ ಅದನ್ನೆ ಮಾಡಿದ್ದು. ಒಂದು ದಿನ ಕೂಡ ಸದ್ದಿಲ್ಲದೆ ಕಲಸಿದಿರಲಿಲ್ಲ ನಿನ್ನೆ ತನಕ! ಇವೊತ್ತು ಮಾತ್ರ ಹಾಳು ಆಲೂಗಡ್ಡೆ....ಹಾಳು ಮೂಲಂಗಿ....ಥೂ....ಛೀ....ಅಂತ ಪ್ರಾರಂಭಿಸಿಬಿಟ್ಟಿರಲ್ಲ! ನಿನ್ನೆತನಕ ಆಕ್ಷೇಪವಿಲ್ಲದ ನಾಲ್ಗೇಗೆ ಇವೊತ್ತೇನಾಗಿದೆ? ನನಗೆ ಬೇರೆ ಅರ್ಥವಾಗೋದಿಲ್ಲಾಂದ್ರೆ ನಿಮ್ನಾಲ್ಗೆ ನ್ಯಾಯ!"

"ಅದು ನಿಜ ಕಣೇ!"

"ಯಾವುದು?"

"ಅರ್ಥ್ವಾಗೋದಿಲ್ಲಾನ್ನೋದು–"

"ಹಾಗಂದ್ರೆ!"

"ಹೋಗಲಿ ಬಿಡು; ಒಂದಿಷ್ಟು ಮಜ್ಗೇನಾದ್ರೂ ಹಾಕು–"

(ಡಾನ್ ಟೊಬಿನ್ ಬರಹವೊಂದರಂತೆ)

—ಸರೋಜಿನಿ

# ಪಾಪಿ ಪುಟ್ರಂಗು

ಪಾಪಿ! ಅವತ್ತೆ ಬರಬೇಕೆ ಅವನು. ಹಾಳಾದೋನು ಬಂದರೆ ತನ್ನ ಕೆಲಸವೇನೋ ನೋಡಿಕೊಂಡು ತೊಲಗಬಾರದೇ-ತಲೆಹರಟೆ-ರಾಜಕಾರಣವೇಕೆ ಈ ಪುಟ್ರಂಗೂಗೆ!

ಗರಿ ಗರಿಯಾದ ಗಾಂಧಿಟೋಪಿ ಓರೆಯಾಗಿ ಹಾಕಿ, ಕನ್ನಡಿಯಲ್ಲಿ ಹುಬ್ಬು ತಿದ್ದಿಕೊಂಡು ಹೊರಟು ನಿಂತಿದ್ದೆ. ಬಿಳಿಯ ಖದ್ದರ್ ಜುಬ್ಬ, ಮಹಾತ್ಮಗಾಂಧಿಯವರು ಹೇಳಿಹೋದಂತೆಯೇ ಕೈನೂಲು ಕೈಮಗ್ಗದ ಪಂಚೆ ಧರಿಸಿ ಹೊರಟು ನಿಂತಿದ್ದೆ. ಗದುಗಿನ ಚಪ್ಪಲಿ ಗಿರ್‌ಗಿರ್ ಎನ್ನುವ ಗಿರ್ಕಿನಾದ ಕೇಳಿ ಹಿಮ್ಮೆಟ್ಟಿದೆ.

ಚೇಳು ಕಡಿಯಿತೆ?-ಹೊಟ್ಟೆಗೆ ಶುಂಠಿರಸ ಬಿತ್ತೆ?-ಉರಿಬೇಸಿಗೆಯಲ್ಲಿ ಉರಿ ಬಿಸಿಲಲ್ಲಿ ಬಕ್ಕಬೋಳ ತಲೆಯಮೇಲೆ ಮೆಣಸು ಅರೆದರೆ? ಕರುಳನ್ನು ಸೋಪುನೀರಲ್ಲಿ ಜಾಲಾಡಿ ನುರಿಯಾಗಿ ಹಿಂಡಿದಂತಾಯಿತೆ?-ಹೂಂ ಇವಿಷ್ಟೂ ಒಟ್ಟಿಗೇ ಆದರೆ ಹೇಗೆ? ಹೌದು ಅದೇ ಸಂಕಟವಾಯಿತು ಆ ಗಿರ್ಕಿಯ ಗಿರತ್ಕಾರ ಕೇಳಿದಾಗ. ಪುಟ್ರಂಗಯ್ಯ ಬಂದಿದ್ದ. ಅವನ ಕಾಲಿನವೇ ಆ ಗದುಗಿನ ಗಿರ್ಕಿ ಚಪ್ಪಲಿಗಳು.

"ಶರಣ್ರಪ್ರೋ ಪಾಡದಿರಾ?"

—ಮಾತಿನಲ್ಲಿ ಪ್ರೊಟಾಸಿಯಂ ಸೈನೈಡಿನ ಲೇಪವಿತ್ತು. ನಮ್ಮ ಪಾಡಿಗೆ ನಾವು ರಾಜ್ಯ ಆಳೋಕೆ ಬಿಡೋಲ್ಲ ಬೇವಾರ್ಸಿ.

"ಬಾಪ್ಪಾ-ಪುಟ್ರಂಗಯ್ಯ, ಲೇ ಪುಟ್ರಂಗಯ್ಯ ಬಂದಿದ್ದಾನೆ ಬಿಸಿ ಬಿಸಿ ಮುದ್ದೆ ಮಾಡು—"

ಏನುಮಾಡಿಸಿದರೇನು ಅವನದು ಟೀಕಾಚಾರ್ಯರ ಜಾಯಮಾನ. ಹಿಂದೊಮ್ಮೆ ಬಾದಾಮಿ ಹಲ್ವದಲ್ಲೆ ಮುಳುಗಿಸಿ ತೇಲಿಸಿದ್ದೆ. ಆದರೇ ನಾಯಿ ಮುಂಡೇದು ಕಚ್ಚೋ ಕಚ್ಚುವುದು.

"ಊಟಮಾಡಿಕೊಂಡು-ಸುಲಗಿ ಸುಧಾರಿಸ್ಕೊ ಪುಟ್ರಂಗು, ನಾನು ಅರ್ಜಂಟು ಮೀಟಿಂಗಿಗೆ ಹೋಗಬೇಕು."

"ಏನು ಮೀಟಿಂಗು ಗಾಂಧಿ ಭಕ್ತರೆ?"

"ಇಲ್ನೋಡು ಪುಟ್ರಂಗಯ್ಯ-ನೀನು ನನ್ನ ಹೆಸರಿಟ್ಟುಕೂಗು-ಈ ಕೊಂಕು ಮಾತು, ಮೊನಚಾದ ನಾಲಿಗೆಯಿಂದ ನನ್ನ ಕೊಲ್ಲಬೇಡ"

"ನಾನೇನಪ ಅಂದೆ ಈಗ-ಏನು ಮೀಟಿಂಗಪಾ ಅಂದೆ. ನಮ್ಮ ಹಳ್ಳಿ ಹೈದ ನೀನು ಈಸೊಂದು ಮೀಟಿಂಗನಾಗೆ ಮಾತಾಡೋ ವಿಚಾರ ನಂಗೆ ಬ್ಯಾಡವಾ! ನಾನೇ ಅಲ್ವಾ ನಿಂಗೆ ಓಟು ಕೊಡ್ಸಿದ್ದು...."

"ಅದಕ್ಕಲ್ಲಯ್ಯಾ-ನೀನು ಸಹಾಯಮಾಡ್ಡೋನು ನಿಜ, ಹಾಗಂತ ಹೇಳಿ ಜನ ಸೇವೆ-ಎಲ್ಲರಸೌಖ್ಯ, ದೀನದರಿದ್ರರ ಸಮಸ್ಯಾಪರಿಹಾರ ಮಾಡೋವಿಚಾರದ ಎಲ್ಲಾ ವಿಷಯ ನಿನಗೆ ಹೇಳೋಕೆ ಆಗುತ್ತೈ?...."

"ಆ ವಿಚಾರ ಎಲ್ಲಾ ಗಾಂಧಿಜಿ ಇದ್ದಾಗ ಅವರು ಮಾಡ್ತಿದ್ರೂ ಅನ್ನೋದು ಗೊತ್ತು ಶಿವ. ಈಗ ನೀವು ಮಾಡೋ ಮೀಟಂಗಿನಾಗೆ ಯಾವ ಸೈಟನವಿಚಾರ-ಯಾರಿಗೆ ಕೊಡಿಸೋ ಚರ್ಚೆ ಮಾಡ್ತಿರೀಂತ ಕೇಳ್ದೆ"

ಶನಿ ಇವನು. ಹೌದು ನಮ್ಮ ದೋಸ್ತಿಗಳೊಬ್ಬರಿಗೆ ಐನಾತಿ ಸೈಟೊಂದರ ವಿಚಾರವಾಗಿ ಜರೂರು ಸಭೆ ಕರೆಸಿದ್ದೆವು.

"....ಅದೇ ನಮ್ಮವನೇ ಆಚೆ ಮನೆಯವನಿಲ್ಲವೆ-ಅವರಿಗೆ ಪಾಪ ಆ ಜಾಗದಲ್ಲಿ ಸೈಟೇ ಇಲ್ಲ...."

"ಹೌದು-ಆ ಜಾಗದಾಗಿಲ್ಲ-ಇನ್ನೆಲ್ಲಾ ಕಡೆಗೂ ಐತೆ. ಮೈಸೂರುದೇಶದ ಎಲ್ಲಾ ಊರಾಗೂ ಒಂದೊಂದು ಮನೆ, ಎಲ್ಲಾ ಕೆರೆಕೆಳಗೂ ಒಂದೊಂದು ಗದ್ದೆ-ಯಾಕಪ್ಪ ಇಂಥಾ ನಿಯ್ಯತ್ತಿಲ್ಲದ ಕೆಲಸ ಮಾಡ್ತೀಯ, ಆಯಪ್ಪನಿಗೆ ತಿಪಟೂರಲ್ಲಿ ನಾಲ್ಕು ತೆಂಗಿನತೋಟ-ತಾಳಗುಪ್ಪದಲ್ಲಿ ಅಡಿಕೆತೋಟ, ಚೆನ್ನಪಟ್ಟಣದಲ್ಲಿ ಸುಣ್ಣದ ಕಾರ್ಖಾನೆ, ಇನ್ನೇನು-ಭದ್ರಾವತಿಲ್ಲೊಂದು ಇವನದೇ ಕಬ್ಬಿಣದ ಕಾರ್ಖಾನೆ-ಕೋಲಾರದಲ್ಲೊಂದು ಸ್ವಂತ ಚಿನ್ನದಗಣಿ ಇಷ್ಟಾದರೆ ಸಾಕೂಂತ ಕಾಣತ್ತೆ.... ನಾಚಿಗೆ ಇಲ್ಲ"

—ತಿರು ತಿರುವಿ ಸೊಗಸಾದ ಪಟ್ಟು ಹಿಡಿದು ಪಲ್ಟಿ ಹೊಡಸಿದ. ನಾನು ಬೆವತೆ ಮೆಲ್ಲಗೆ ಗರಿ ಗರಿಯ ಗಾಂಧಿಟೋಪಿ ತೆಗೆದು ಜೇಬಿಗೆ ಸೇರಿಸಿಬಿಟ್ಟೆ. ಎದುರುಗಿನ ಕುರ್ಚಿಯಲ್ಲಿ ಕುಕ್ಕರಿಸಿ ಹಣೆಯಮೇಲಿನ ಬೆವರು ಸಾಲು ಒರಸಿಕೊಂಡೆ. ಮಹಾ ಪ್ರಚಂಡ ಪುಟ್ರಂಗು ಅವನ ಸಹವಾಸವೇ ಕಷ್ಟ. ಸುಮ್ಮನೆ ಅವನ ಹತ್ತಿರ ಬೈಸಿ ಕೊಂಡು ತೆಪ್ಪನಿರದಿದ್ದರೆ ನಿರ್ವಾಹವೇ ಇರಲಿಲ್ಲ.

ಅಂದುಕೊಳ್ಳಿ ಏನೀಗ-ಈತ ಅನ್ನುವವರೆಗೆ ಕಷ್ಟಪಟ್ಟು ಸಹಿಸಿಕೊಂಡುಬಿಟ್ರೆ ಸರಿ. ಮೆತ್ತಗೆ ನಾನೇ ಹೇಳಿದೆ—

"ಆಮೇಲೆ ಮಾತಾಡೋವಂತೆ ಪುಟ್ರಂಗು-ಮೊದಲು ಊಟ ಮಾಡೇಳು"

"ಇರ್ಲಿ ಬುಡಿ ಅಯ್ಯನೋರ-ಊಟ ಇದ್ದೇಐತೆ ...ಅರೆ! ಇದ್ದೇಐತೆ ಅಂತ ಅಂದ್ನಾ? . ಹೌದು ನಿಮ್ಮಂಥ ಅವರಿಗೆ ನಂಬರುಗಳಿಗೆ-ಇದ್ದೇಐತೆ ..."

"ನಿನಗೇನು ನಿತ್ಯಾ ಉಪವಾಸವೋ ಹಾಗಾದ್ರೆ"

ನನ್ನಂಥ ಬೇವಾರ್ಸಿಗಳು ಲಕ್ಷಾಂತರ ಇಲ್ವಾ?-ಮುಂಜಾನಿಂದ ಸಂಜೆತನಕ ಇನ್ನೊಬ್ರ ಹೊಲ ಉಳೋನಿಗೆ-ಹೆಂಡ್ರು ಮಕ್ಳು ತಾನುಸೇರಿ, ದೊಡ್ಡ ಬಂಗ್ಲೆ ಕಟ್ಟೋಕೆ

ಕಲ್ಲು ಹೊರೋನಿಗೆ – ಒಪ್ಪತ್ತಿನ ಊಟಕ್ಕೆ ಇಪತ್ನಾಕುಕಾಸು ಹರಿದ ಅಂಗಿ ಹಾಕ್ಕೊಂಡು ನಿಮ್ಮ ಬಟ್ಟೆ ಮಿಷಿನ್ನಿನೊಳಗೆ ದಾರಾ ಪೋಸಿಯೋ ಬಡ್ಡಿ ಮಕ್ಕಳಿಗೆ ಎಲ್ಲೈತೆ ಊಟ ಗಾಂಧಿಭಕ್ತರೇ"

– ನರನರಗಳನ್ನೇ ಬಾಚಣಿಗೆಯಿಂದ ಬಾಚಿ ಸಿಕ್ಕುಬಿಡಿಸಿ ಬಿಸಿಲಿಗೆ ಹರವಿ ದಂತಾಯ್ತು. ಇವನ ಮನೆ ಹಾಳಾಗ ಅವನು ಹೇಳಿದ್ದೆಲ್ಲಾ ನಿಜ. ಅದಕ್ಕೆ ನಾನು ಜವಾಬ್ದಾರಾ ಅನ್ನೋಹಾಗೆ ಸ್ವರಹೊಡಿಸುತ್ತಾನೆ ಪುಟ್ರಂಗು ಅದುತಪ್ಪು.

"ಅದೆಲ್ಲಾ ಅರ್ಧದಿನದಲ್ಲಿ ಸರಿಹೋಗೋದಲ್ಲ ಪುಟ್ರಂಗು–ಕಾಲಬೇಕು–ತಾಳ ಬೇಕು ತಾಳ್ಮೆಬೇಕು" ಎಂದು ತಕ್ಕೈಸಿದೆ.

"ಹೂಂ ಬೇಕು, ತಾಳ–ತಂಬೂರಿ ಜೋಳಿಗೆ....ಏನಾಕ್ತಾದ್ರಿ ಬಿಡು ಹ್ಞೂಂ.... ಕ್ಕೊಟ್ಟುಬಿಡು ಅವನ್ನೂವೆ ಕೈಗೆ...."

"ಮಾತುಮಾತಿಗೆ ನೀನು ಗಾಂಧಿ ಟೋಪೀಂತ ಕುಕ್ಕಬೇಡಯ್ಯಾ–ನೀನು ಬಂದರೇ ಹೀಗೆ...."

"ಮಹಾತ್ಮಗಾಂಧಿಜಿ ಅಂದರೆ ಒಂದು ವಿಚಾರ ನೆಪ್ಪು ಬಂತು–ಅವರದ್ದು ದೊಡ್ಡಗೊಂಬೆ ಎರಕ ಮಾಡ್ಸಿದ್ದೀರಂತೆ ಔದಾ?"

"ಹೌದು ಪುಟ್ರಂಗು–ರಾಷ್ಟ್ರಪಿತಾಮಹರ ದೊಡ್ಡ ಸ್ಟ್ಯಾಚು ಮಾಡ್ಸಿದ್ದೀವಿ. ಆ ಪುಣ್ಯಾತ್ಮನ ಪ್ರತಿಮೆಯ ಸಂದರ್ಶನದಿಂದ–ಸತ್ಯ–ಅಹಿಂಸೆ–ಹಸಿವು–ದಾರಿದ್ರ್ಯಗಳು ನಿವಾರಣೆಯಾಗಲು ಸ್ಫೂರ್ತಿಬರೋಕೆ ಸಾಧನವಾಗಲೀಂತ ಅದನ್ನ ಮಾಡ್ಸಿ ಹತ್ತುಮಂದಿ ಸೇರೋಕಡೆ ಇಟ್ರೆ ಚೆನ್ನಾಗಿರುಲ್ವೆ?...."

—ಮಹಾತ್ಮರ ಪರಮಭಕ್ತನಾದ ನಾನು ಪೂಜ್ಯ ರಾಷ್ಟ್ರ ಪಿತಾಜಿಯವರ ಹೊಸ ಪ್ರತಿಮೆ ನೆನೆದು ಭಕ್ತಿಯಿಂದ ಈ ನಾಲ್ಕು ಮಾತು ಭಾಷಣರೋಪಾದಿಯಲ್ಲಿ ಈ ಮೂರ್ಖ ಪುಟ್ರಂಗು ಎದುರಿಗೆ ಹೇಳಿದೆ.

ಅವನು ಬಿಡಬೇಕಲ್ಲ ನನ್ನ ಮಾತಲ್ಲೇ ಮಸಿಮಾಡಿ ನನ್ನ ಮೂತಿಗೇ ತಿಕ್ಕುವ ಪ್ರಚಂಡ ಪುಟ್ರಂಗು.

"ಅದನ್ನ ಎಲ್ಲಿಡ್ತಿರಾ ಮಹಸ್ವಾಮಿ–ನಾನು ಸ್ವಂತ ನೂತದಾರದ ಹಾರ ತಂದೀವ್ನಿ ಹಾಕಬೇಕು ಅದಕ್ಕೆ ."

"ಅದನ್ನ....ಇಡೋ ಸ್ಥಳವೇ? ...ಎಲ್ಲೀ ಅಂ ...ಉಂ....ಎಲ್ಲಿ... ಯಾವ ಸ್ಥಳಾಂತ ಅನ್ನೋದು ಇನ್ನೂ ನಿರ್ಧಾರವಾಗಿಲ್ಲ ..."

"...ಓ, ಯಾರೋ ಅಂದ್ರು ಅದನ್ನ ಟೌನುಆಲು ಮುಂದಿಡ್ತಾರೇಂತ..."

"....ಹೂಂ ಅಲ್ಲೀಂತ ಆಗಿತ್ತು–ಮತ್ತೆ ಮಾರ್ಕೆಟ್ಟು ಹತ್ರ ಇಲ್ವೆ ಕಬ್ಬನ್ನು ಪಾರ್ಕು–ನೋಡೋ ಜನ ಬಂದು ನೋಡಿ ಸ್ಫೂರ್ತಿಗೊಳ್ಳೋ ಸ್ಥಳ ಆರಿಸ್ತಾ ಇದ್ದೀನಿ...."

"...ಅಯ್ಯೋಯಪ್ಪಾ . ನಿನ್ನಮಾತಿಗೆ ಮುದ್ದಿಕ್ಕ ಗಾಂಧಿಜಿ ಪ್ರತಿಮೆ ಇಡೋಕೆ ಏನೊಂದು ಹಗರಣ ಮಾಡ್ಕೊಂಡಿದ್ದೀರಲ್ಲಾ ನಿಜ ಒಪ್ಕೊಂಡೆ–ಅದನ್ನ ಎಲ್ಲಿಡೋದೂ ನ್ನೋದು ಕಷ್ಟ–ಮಾರ್ಕೆಟ್ನತ್ರ ಇಟ್ರೆ–ಬರಿ ವ್ಯಾಪಾರ ಅಲ್ಲಿ ನೂಕು ನುಗ್ಲು ಕಳ್ಳತನ ಇದೆಲ್ಲಾ ಆಯಪ್ಪನ ಪ್ರತಿಮೆ ನೋಡ್ತಾ ಮಾಡೊಕಾಯ್ತದ? ಇನ್ನ ರಾತ್ರಿ ಪುಟ್ ಪಾತ್ನಲ್ಲಿ ಮಲ್ಗೊ ಪಾಪಿಗಳು ಈ ಪ್ರತಿಮೆ ಕಾಲುಮೇಲೆ ಬಿದ್ದು" ನೋಡಪ್ಪಾ ಮಹಾತ್ಮ ನೀನು ಪಟ್ಟಕ್ಕೆತಂದ ನಿನ್ನ ಶಿಷ್ಯಂದ್ರು ಇನ್ನೂ ನಮ್ಮನ್ನ ಬೀದೀಲಿ ಮಲ್ಗೊ ರೀತಿವಳಗೆ ಇಟ್ಟಿದ್ದಾರೆ ಅಂತ ದೂರು ಹೇಳಿದರೆ ನಿಮಗೆ ಕಷ್ಟಅಲ್ವೆ? ಇನ್ನೂ ಟೌನುಹಾಲು–ನೀವು ಸಭೆಮಾಡೋಜಾಗ–ಮಾಡಿದವಾಗ್ದಾನ–ಹರಿಜನೋದ್ಧಾರ–ಗ್ರಾಮೋದ್ಧಾರ–ದರಿದ್ರನಾರಾಯಣ ಸೇವೆ ವಿಚಾರ ಪುಂಖಾನು ಪುಂಖವಾಗಿ ಶಂಖ ಹೊಡಿಯೋಕೆ ಗಾಂಧಿಪ್ರತಿಮೆ ಮುಂದಿಟ್ಕೊಂಡು ಹ್ಯಾಂಗೆ ಆಗ್ತದೆ? ನಿಜ ಅದನ್ನು ಇಡೋಕೆ ಜಾಗಸಿಕ್ಕೋದು ಬಲುಕಷ್ಟ ಭಂಗಿ ಕಾಲೋನಿನೇ ಆಯಪ್ಪ ಇರೋವರ್ಗ ಅವನಮನೆ ಆಗಿತ್ತಲ್ಲವಾ?–ಅಂದಮ್ಯಾಗೆ ನಮ್ಮೂರ ಹರಿಜನ ಕೇರೀಲಿ ಯಾಕೆ ಆ ಪ್ರತಿಮೆ ಇಡಬಾರ್ದು? "

—ನನ್ನ ಎರಡೂ ಕಾಲು ಹಿಡಿದು ಗರಗರನೆ ಅಂತರಿಕ್ಷದಲ್ಲಿ ತಿರುವಿ ರಪ್ಪನೆ ನೆಲಕ್ಕೆ ಸೆಳೆದಂತಾಯಿತು. ಪಾಪಿ ಪುಟ್ರಂಗು ಎಂತಹ ಮೊನಚಾದ ನಾಲಿಗೆಯಿಂದ ನನ್ನ ಇರಿದುಕೊಂದಿದ್ದ. ಗಂಟಲು ಒಣಗಿ ನನಗೆ ಮಾತೇ ಹೊರಡದಾಯ್ತು. ಹಾಕಿದಖಾದಿ ಮುಳ್ಳಂಗಿಯಾಯ್ತು–ಉಟ್ಟಧೋತ್ರ ಗುಂಡುಸೂಜಿಯಲ್ಲಿ ನೆಯ್ದು ಮಾಡಿದ್ದಂತೆ ಭಾಸವಾಯ್ತು.

ಅವನೇ ಮತ್ತೆ ಹೇಳಿದ–ಎದ್ದು ಕಂಬ್ಳಿಹೊದ್ದು ನನ್ನ ಮನೇಲಿ ನೀರು ಕುಡಿದೇನೆ.

ಹೂಂ—ಗಾಂಧಿಜೀನ್ನ ಎಲ್ಲಾರೂ ಹೃದಯದೊಳಗೆ ಇಟ್ಕೊಬೇಕು—ಗೊತ್ತಾಯ್ತಾ? "ಸಾವಿರಾರುರೂಪಾಯಿ ಖರ್ಚುಮಾಡಿ ಪ್ರತಿಮೆ ಮಾಡ್ಸಿ ಇಡೋಕೆ ಪರದಾಡೋದು ಮೇಲಿರೋ ಗಾಂಧಿನೋಡಿ ಭಾಳಚಿಂತೆ ಮಾಡ್ತಾನಪಾ–ಅದೇ ಸಾವಿರಾರು ರೂಪಾಯಿ ಹರಿಜನರಿಗೆ ಖರ್ಚುಮಾಡಿ ಒಳ್ಳೆಮನೆಕಟ್ಟಿ–ಗಲೀಜು ತೆಗಿಸಿದ್ದರೆ ಆಯಪ್ಪನ ಆತ್ಮ ತೃಪ್ತಿ ಆಯ್ತಿತ್ತು" ಎಂದು ಹೊರಟೇಹೋದ.

ಎಷ್ಟೊಂದು ನಿಜವಾದ ಮಾತಾಡಿ ನನ್ನ ಬಿಳಿಟೋಪಿಗೆ ಮಸಿಬಳಿಸಿದ್ದ ಅವ! ಉಹುಂ ಅವನಲ್ಲ ನಾನೇ ಮೆತ್ತಿಕೊಂಡಿದ್ದು ಅಲ್ಲವೆ?

ಆದರೂ ಇದೂ ಮಾಡಿ ಅದನ್ನೂ ಮಾಡ್ತೇವೆ ಅನ್ನೋ ಹೊತ್ತಿಗೆ ಹೊರಟೇ ಹೋದನಲ್ಲ!

—ದಾಶರಥಿದೀಕ್ಷಿತ್

ಜೀವವಿಮೆಯು

ಗಂಡನ ಕರ್ತವ್ಯ,

ಹೆಂಡತಿಯ ಭಾದ್ಯತೆ

ಮತ್ತು ಮಗುವಿನ ಹಕ್ಕು

# ಮೈಸೂರು ಸರ್ಕಾರದ

# ವಿಮಾ ವಿಭಾಗ

ಪೂರ್ಣ ಭದ್ರತೆ ★ ಒಟ್ಟು ಮೊಬಲಗು 300,00,000 ಕ್ಕೂ ಮೀರಿದೆ

ಕಡಿಮೆ ಪ್ರೀಮಿಯಂ ★ ಪಾವತಿಯಾದ ಮೊಬಲಗು 100,00,000

ಅತ್ಯಧಿಕ ಬೋನಸ್ಸು ★ ಅತಿ ಕಡಿಮೆಯಾದ ಶೇಕಡಾ ಖರ್ಚು

ಸಾರ್ವಜನಿಕ ವಿಭಾಗದಲ್ಲಿ

★

ಇಂದೇ ವಿಮೆ ಮಾಡಿರಿ.

**ಮೋಟಾರು ವಿಮೆಯನ್ನು ಕೂಡ ಪೈಪೋಟಿಯ ದರಗಳಲ್ಲಿ ಮಾಡಲಾಗುತ್ತದೆ.**

ಇಲಾಖೆಗೆ ಪಾವತಿಮಾಡಬೇಕಾದ ಹಣವನ್ನು ಕಛೇರಿಯ ಕ್ಯಾಷ್ ಸೆಕ್ಷನಲ್ಲಿ ಸ್ವೀಕರಿಸಲಾಗುತ್ತೆ.

★

——— ದಯವಿಟ್ಟು ವಿಚಾರಿಸಿ ———

ಕಾರ್ಯದರ್ಶಿ

## ಮೈಸೂರು ಸರ್ಕಾರದ ವಿಮಾ ಇಲಾಖೆ

ಬೆಂಗಳೂರು.

ತಾರು : " ಇನ್ಸೆಕ್ " ಫೋನು : 2918

# ಕೊರವಂಜಿ

ಕೊರವಂಜಿಯು ತಿಳಿನಗೆಯ ಸಚಿತ್ರ ಮಾಸಪತ್ರಿಕೆ. ತಿಳಿಹಾಸ್ಯದ ಲೇಖನಗಳು, ಹರಟೆಗಳು, ಅಣಕವಾಡುಗಳು, ನಗೆ ಹಾಡುಗಳು ಇವುಗಳಿಗೆ ಸರ್ವದಾ ಸುಸ್ವಾಗತ ವುಂಟು. ಆದರೆ ವ್ಯಕ್ತಿಯನ್ನುದ್ದೇಶಿಸಿ ಬರೆದ ಲೇಖನಗಳಿಗೆ ಎಡೆಯಿಲ್ಲ.

ಲೇಖನಗಳನ್ನು ಕಳುಹಿಸುವವರು ತಮ್ಮಲ್ಲಿ ಒಂದು ಪ್ರತಿಯನ್ನಿಟ್ಟುಕೊಂಡರೆ ಬಹಳ ಒಳಿತು. ಸುಲಭವಾಗಿ ಓದುವಂತೆ ತಿಳಿಯಾದ ಬರಹದಲ್ಲಿ ಬರೆದರೆ, ಅಚ್ಚಾದಾಗ ತಪ್ಪು ನೆಪ್ಪುಗಳು ಕಡಿಮೆಯಾಗುವುವು. ಒಪ್ಪಿದ ಲೇಖನಗಳಿಗೆ ಪ್ರತ್ಯುತ್ತರ ಉಂಟು.

ಸಂಪಾದಕೀಯ ಪತ್ರವ್ಯವಹಾರಗಳನ್ನು ಸಂಪಾದಕರಲ್ಲೂ ವ್ಯವಸ್ಥಾಪಕರಲ್ಲಿ ವಿಕ್ರಯ ವಿಚಾರಗಳನ್ನೂ ಪ್ರಸ್ತಾಪಿಸಬೇಕು

ಬಳೇಪೇಟೆ, ಬೆಂಗಳೂರು ೨.

**ವಾರ್ಷಿಕ ಚಂದಾ ಅಂಚೆ ಮೂಲಕ ರೂ. ೩—೦—೦**

**ಬಿಡಿ ಪ್ರತಿ ಕೇವಲ ಆಣೆ ೦—೪—೦**

**ಚಂದಾದಾರರು ವಿಳಾಸ ಬದಲಾವಣೆಯಾದಲ್ಲಿ, ಕೂಡಲೆ ನಮಗೆ ತಿಳಿಸಿದರೆ ಬಹಳ ಸಹಾಯ ಮಾಡಿದಂತಾಗುವುದು.**




# ವೈಟೋಫೆರಿನ್

## (ಆಧುನಿಕ ಶಕ್ತಿವರ್ಧಕ ಟಾನಿಕ್)

ಇದರಲ್ಲಿ "ಎ" "ಬಿ" ಮತ್ತು "ಡಿ" ಎಂಬ ವೈಟಮಿನ್ನುಗಳೂ, ಐರನ್, ಕ್ಯಾಲ್ಸಿಯಂ ಮುಂತಾದ ಲೋಹ ವಿಶೇಷಗಳೂ, ಶುದ್ಧಗೊಳಿಸಿದ ತಾಮ್ರವೂ, ಮತ್ತು ಮಾಲ್ಟ್‌ಸಾರ, ಜೇನುತುಪ್ಪಗಳನ್ನು ಸೇರಿಸಿ ತಯಾರಿಸಿದ ಒಂದು ಅಮೃತಪಾನ. ಇದರಲ್ಲಿ ದೇಹಶಕ್ತಿಗೆ ಬೇಕಾದ ಸಕಲ ಔಷಧಗಳ ಸಮೂಹವೂ ಇದೆ. ಖಾಯಿಲೆಯಿಂದ ಎದ್ದವರಿಗೂ, ಬಸುರಿ ಬಾಣಂತಿಯರ ದೇಹದಾರ್ಢ್ಯಕ್ಕೂ ಇದು ಅತ್ಯುತ್ತಮವಾದ ಔಷಧ. ಸೇವಿಸಲು ಬಹಳ ರುಚಿಯಾಗಿಯೂ ಮತ್ತು ಮಧುರವಾಗಿಯೂ ಇದೆ.

★ ★

ತಯಾರಕರು :

**ದಿ ಮೈಸೂರು ಇಂಡಸ್ಟ್ರಿಯಲ್ ಅಂಡ್ ಟೆಸ್ಟಿಂಗ್ ಲ್ಯಾಬೋರಟರಿ ಲಿಮಿಟೆಡ್,**

ಮಲ್ಲೇಶ್ವರಂ - - - ಬೆಂಗಳೂರು 3.

REG. No. M 4718 KORAVANJI SEPTEMBER 1954



Printed by B. S. Iyengar, Bangalore City

Publisher—B. N. Gupta. Editor—M. Sivaram.